# ನಮ್ಮ ಮಾನಸ

**ಜುಲೈ 2008**

ಸಂಪುಟ : 2 ಸಂಚಿಕೆ : 3

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*




ಚಂದಾ ವಿವರ

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ





ಮುಖಪುಟ ಚಿತ್ರ ಕೃಪೆ : ಜನವಾದಿ ಮಹಿಳಾ ಸಂಘಟನೆ
ಛಾಯಾಗ್ರಾಹಕರು : ಚಂದನಾ ಚಂದ್ರಶೇಖರ್, ಕೋಲಾರ


## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು

– – –

**ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ**
*ಚಂದಾ ನವೀಕರಣಕ್ಕೆ ಸಂಪರ್ಕಿಸಿ*
**ವೆಂ. ವನಜ**
*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ಮಹಿಳೆ-ಅನುಭವ-ಅಭಿವ್ಯಕ್ತಿಯ ಪ್ರಶ್ನೆಗಳು

ಜಾಗತೀಕರಣದ ಅನಂತರದ ಈ ದಿನಗಳು ಸಂಸ್ಕೃತಿ, ಪರಂಪರೆಯ ಜಿಜ್ಞಾಸೆಗಳಿಗೆ ಎರಗಿದ ಚಳಿಗಾಲದಂತೆ ಇವೆ. ಸಮೂಹ ಚಳವಳಿಗಳಲ್ಲಿ ಕಾವು ಇಲ್ಲ, ರಾಜಕೀಯ ಪಕ್ಷಗಳು ತಮ್ಮದೇ ಅಜೆಂಡಾಗಳಿಗಾಗಿ ಬೀದಿಗಿಳಿದು ಹೋರಾಡುತ್ತವೆ. ಆದರೆ ಸಮಾಜದ ಎಲ್ಲ ಪ್ರಜ್ಞಾವಂತರು, ಸಮಾಜವಾದದಲ್ಲೂ ಜನತಾಂತ್ರಿಕ ವ್ಯವಸ್ಥೆಯಲ್ಲೂ ನಂಬಿಕೆಯಿಟ್ಟವರೆಲ್ಲರೂ ಸ್ಪಂದಿಸುತ್ತಿದ್ದ ರೀತಿಯ ಚಳವಳಿಗಳು ಇವು ಅಲ್ಲ. ಸಮೂಹ ಚಳವಳಿಗಳಿಗೆ ಬೆನ್ನೆಲುಬಾಗಿರುವ ತಾತ್ವಿಕ ಚರ್ಚೆಗಳಿಗೂ ಸಾರ್ವಜನಿಕ ವೇದಿಕೆಗಳು ಈಗ ಸೃಷ್ಟಿಯಾಗುತ್ತಿಲ್ಲ. ಸಮಾಜವೂ ಸಂಸ್ಕೃತಿಯೂ ವ್ಯಾಪಾರೀಕರಣದ ರಥಯಾತ್ರೆಗಾಗಿ ದೌಡಾಯಿಸುತ್ತಿರುವಂತೆ ಕಾಣುವ ಇಂದಿನ ಪರಿಸರದಲ್ಲಿ ಮಹಿಳಾ ಚಳವಳಿಯೂ ಅದರ ಸಂಬಂಧಿತವಾದ ಚರ್ಚೆಗಳೂ ಬೆಂಗಳೂರಿನ ಹಾಗೆ ಧೂಳು ಅಡರಿಸಿಕೊಂಡು ಕೂತಿವೆ, ವಿಶ್ವವಿದ್ಯಾಲಯಗಳ ಮಹಿಳಾ ಅಧ್ಯಯನದ ಪೀಠಗಳಲ್ಲಿ ನಿದ್ದೆಹೋಗಿವೆ.

ಜಾಗತಿಕ ಮಾರುಕಟ್ಟೆ ಒಡೆಯರ ಒತ್ತಡಕ್ಕೆ ಮಣಿದು ನಾವು ನಮ್ಮ ನೆಲ, ಜಲ, ಜನ, ದನಗಳಿಗೆ ಒಗ್ಗಲಾರದ ಕೃಷಿತಾಂತ್ರಿಕತೆಗೆ ಜೋತುಬಿದ್ದು ರೈತರನ್ನು ಸಾವಿನ ದವಡೆಗೆ ನೇರವಾಗಿ ನೂಕಿ ವಿರಮಿಸುತ್ತಿದ್ದೇವೆ. ನಮ್ಮ ಬದುಕಿನ ಸಾರ ಹೀರಿ ಬೆಳೆದಂಥ ಸಾಹಿತ್ಯ, ಚಿತ್ರಕಲೆ, ನಾಟಕ ಕಲೆಗಳೂ ಈ ನೆಲದ ಸಾಮಾನ್ಯ ಜನರ ಬದುಕಿಗೆ ವಾಪಸ್ಸು ಎಂಥ ಕಾಣಿಕೆಯನ್ನು ಕೊಡಲು ಸಾಧ್ಯ? ಎಂಬಂಥ ಗಂಭೀರ ವಿಷಯಗಳ ಚರ್ಚೆಗೆ ಪುರಸೊತ್ತು ಇಲ್ಲದ ಹಾಗೆ ಬದುಕು ಓಡುತ್ತಿದೆ. ಕಳೆದ ಎರಡು ಮೂರು ದಶಕಗಳಿಂದಷ್ಟೇ ಇಂಥ ಚರ್ಚೆಗಳಲ್ಲಿ ಕೇಳಿಸತೊಡಗಿದ ಮಹಿಳೆಯರ ಧ್ವನಿಗೆ ಈಗ ಏನಾಗಿದೆ? ಅವರದೇ ಸ್ವಂತಿಕೆಯ ಛಾಪನ್ನು ಅವರು ತೊಡಗಿಕೊಂಡ ಕ್ಷೇತ್ರಗಳಲ್ಲಿ ಹೊಮ್ಮಿಸಲು ಏನು ಮಾಡಬೇಕಿದೆ? ಎಂಬ ತುಂಬ ಸಂಕೀರ್ಣವಾದ ತಾತ್ವಿಕ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ.

ಬೇರೆ ಬೇರೆ ಸಮೂಹ ಚಳವಳಿಗಳಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡಿರುವ ಮಹಿಳಾ ಹೋರಾಟಗಾರರು (ಸಂಘಟಿತ, ಅಸಂಘಟಿತ ವಲಯಗಳೆರಡನ್ನು ಪ್ರತಿನಿಧಿಸುವವರು), ಕಾವ್ಯ, ನಾಟಕ, ಕಥನ ಸಾಹಿತ್ಯ, ವಿಮರ್ಶೆಗಳ ಸಾಹಿತ್ಯ ಕ್ಷೇತ್ರದಲ್ಲಿ ಗಮನಾರ್ಹ ಸೃಷ್ಟಿಯಲ್ಲಿ ತೊಡಗಿರುವವರು, ರಂಗಭೂಮಿ, ದೂರದರ್ಶನ, ಪತ್ರಿಕೆಗಳಂಥ ವಿವಿಧ ರೀತಿಯ ದೃಶ್ಯ ಹಾಗೂ ಅಕ್ಷರ ಮಾಧ್ಯಮಗಳ ಕ್ರಿಯಾನಿರತರು, ಶಿಕ್ಷಕರು ಕಾರ್ಮಿಕರು ವಿಜ್ಞಾನಿಗಳು ಸೇರಿದಂತೆ ತುಂಬ ವೈವಿಧ್ಯಮಯ ಮಹಿಳಾ ಅನುಭವಗಳು ಮುಖಾಮುಖಿಯಾಗುವುದು ಈ ಹೊತ್ತಿನ ತುರ್ತು ಎನ್ನಿಸುತ್ತದೆ.

ಚಳವಳಿಯೇ ಬೇರೆ, ಕಲಾಭಿವ್ಯಕ್ತಿಯೇ ಬೇರೆ ಎಂಬುದಾಗಿ ಧ್ರುವೀಕರಿಸಿ ನೋಡುತ್ತಾ ಬಂದಿರುವ ಪ್ರಧಾನ ಸಂಸ್ಕೃತಿಯ ಧೋರಣೆಯನ್ನು ಮುರಿಯುವ ಅಗತ್ಯವಿದೆ. ವ್ಯಕ್ತಿ ಶಕ್ತಿಯ ಅಭಿವ್ಯಕ್ತಿಯ ಭೌತಿಕ ರೂಪಗಳೇ ಹೇಗೆ ಮಾನಸಿಕ ಸಂವೇದನೆಯ ಭಾವಲಯಗಳ ಮೂಲಕ ಕಲೆಯಾಗಿ ರೂಪುತಳೆಯಬಹುದು ಎಂಬುದು ತುಂಬ ಸೂಕ್ಷ್ಮವಾದ ಚರ್ಚೆಯನ್ನು ಬಯಸುವ ವಿಚಾರ. ಚಳವಳಿಯಲ್ಲಿ ಮಹಿಳಾ ನಾಯಕತ್ವದಿಂದ ಹೇಗೆ ಇಡೀ ಚಳವಳಿ ಅಧಿಕಾರಕೇಂದ್ರಿತ ರೀತಿಯಲ್ಲಿ ವಿಸ್ತಾರಗೊಳ್ಳಬಲ್ಲದು, ರೈತ ಮಹಿಳೆಯರ ಭೂಹೀನತೆ, ಆರ್ಥಿಕ ಪರಾವಲಂಬಿತ ಸ್ಥಿತಿಗಳು ನಿವಾರಣೆಯಾದ ಪಕ್ಷದಲ್ಲಿ ಹೇಗೆ ಇಂದು ಕಳೆದುಹೋಗುತ್ತಿರುವ ಕೃಷಿ ಉತ್ಪಾದನಾ ವ್ಯವಸ್ಥೆಗೆ ಕುಟುಂಬಿನಿಯರೇ ಹೊಸ ಸ್ಥಿರತೆಯನ್ನು ತರಬಲ್ಲರು ಎಂಬುದು ಗಮನಾರ್ಹವಾದ ವಿಚಾರ. ಜಾಗತೀಕರಣವು ಉದಾರ ಆರ್ಥಿಕ ನೀತಿ, ಖಾಸಗೀಕರಣ ಮತ್ತು ಸಣ್ಣ ಉದ್ದಿಮೆಗಳ ನಿರ್ಮಾಣಕ್ಕೆ ಹೇಗೆ ಒತ್ತುಕೊಟ್ಟಿದೆ, ಮತ್ತು ಇದರಿಂದಾಗಿ ಸುಲಭವಾಗಿ ನೇಮಿಸಿಕೊಳ್ಳಬಲ್ಲ, ಕಡಿಮೆ ಕೂಲಿಗೆ ದುಡಿಸಬಲ್ಲ. ಬೇಕಾದಾಗ ಕಿತ್ತೊಗೆಯಬಲ್ಲ ಮಹಿಳಾ ಕಾರ್ಮಿಕರ ನೆಲೆ ಅತ್ಯಂತ ಅಸ್ಥಿರ ಹಾಗೂ ಅತಂತ್ರ ಆರ್ಥಿಕತೆಯ ಸ್ಥಿತಿಯಾಗಿದೆ.

ಸಾಹಿತ್ಯದ ವಿವಿಧ ಪ್ರಕಾರಗಳೊಳಗೆ ಮಹಿಳೆಯರ ಅನುಭವಗಳ ಮುಕ್ತವೂ, ತೀವ್ರವೂ ಆದ ರೀತಿಯ ಅಭಿವ್ಯಕ್ತಿಗೆ ಕೂಡ ಅನೇಕ ಬಗೆಯ ತೊಡಕುಗಳು ಎದುರಾಗುತ್ತವೆ. ಕೆಳಸ್ತರೀಯ ಮಹಿಳಾ ಬರಹಗಾರಿಕೆಗೆ ದಕ್ಕುವಂಥ ಮತ್ತು ದಕ್ಕದೆ ಇರುವಂಥ ನಿರ್ಭಿಡೆಯ ಅಭಿವ್ಯಕ್ತಿಯ ಅವಕಾಶ ಅದರ ಹಿಂದಿರುವ ಸಾಂಸ್ಕೃತಿಕ ಕಾರಣಗಳ ಜಿಜ್ಞಾಸೆ, ಮಧ್ಯಮ ವರ್ಗೀಯ ಮಹಿಳಾಭಿವ್ಯಕ್ತಿ ಎದುರಿಸುತ್ತಿರುವ ಮುಜುಗರದ ತೊಡಕುಗಳ ಚರ್ಚೆ ಹೆಚ್ಚು ಅರ್ಥಪೂರ್ಣವಾಗಿ ನಡೆಯಬೇಕಾಗಿದೆ. ಕಾರ್ಪೋರೇಟ್ ವ್ಯವಸ್ಥೆಯ ಬೃಹತ್ ಬಂಡವಾಳಶಾಹಿಯ ಲಾಭಕೋರ ನೀತಿಗಳು ಹೇಗೆ ಕಿರುತೆರೆ ಮತ್ತು ಪತ್ರಿಕೆಗಳ ಮಾಧ್ಯಮದಲ್ಲಿ ತಮಗೆ

ಲಾಭಕರವಾಗುವಂಥ ಅಂಶಗಳಿಗಷ್ಟೇ ಆದ್ಯತೆ ನೀಡುತ್ತವೆ ಮತ್ತು ಅನುಭವಗಳ ವಾಸ್ತವ ರೀತಿಯ ಅಭಿವ್ಯಕ್ತಿಗೆ ಅಂಕುಶ ಹಾಕುತ್ತವೆ ಎಂಬ ವಿಚಾರ ಮತ್ತು ಮೆಗಾ ಸೀರಿಯಲ್‌ಗಳನ್ನು ಮುಗ್ಧವಾಗಿ ಟಿ.ವಿ.ಗೆ ಅಂಟಿಕೊಂಡು ನೋಡುವ ವಿವಿಧ ವಯೋಮಾನದ ಮಹಿಳಾ ಪ್ರೇಕ್ಷಕರಿಗಾಗಿ ಹೇಗೆ ಸರಕು ಸಂಸ್ಕೃತಿಯು ಜಾಹೀರಾತನ್ನು ಬಲೆಯಾಗಿ ಬೀಸಿ ತನ್ನ ಗ್ರಾಹಕ ವರ್ಗವನ್ನು ಸೃಷ್ಟಿಸುತ್ತಿವೆ ಎಂಬುದರ ಚರ್ಚೆ ಮನಸ್ಸನ್ನು ತೆರೆಸಬೇಕಾಗಿದೆ.

ಆರೋಗ್ಯ ರಕ್ಷಣೆಯ ಹೆಸರಿನಲ್ಲಿ ವೈಜ್ಞಾನಿಕ ಆವಿಷ್ಕಾರಗಳು ಕ್ಲಿನಿಕಲ್ ಉದ್ಯಮವನ್ನು ಉದ್ಧರಿಸಲು ಮಹಿಳೆಯರ ದೇಹವನ್ನೇ ಪ್ರಯೋಗಾಲಯ ಮಾಡಿಕೊಳ್ಳುವ ಹುನ್ನಾರಗಳು, ವಿಕೇಂದ್ರೀಕೃತ ಖಾಸಗಿ ಕಿರುಉದ್ಯಮಗಳಲ್ಲಿ ದುಡಿಯುವ ಮಹಿಳೆಯರ ವೈಯಕ್ತಿಕ ಹೋರಾಟದ ದಾರುಣಸ್ಥಿತಿ, ಬೀದಿಕಸ ಗುಡಿಸುವ ಅಸಂಘಟಿತ ಕಾರ್ಮಿಕರ ಬವಣೆಗಳು, ಜಾಗತಿಕವಾಗಿ ಯುದ್ಧ ಭಯೋತ್ಪಾದನೆ, ಕೋಮು ಸಂಘರ್ಷಗಳಲ್ಲಿ ಮಹಿಳೆಯರ ಮೇಲೆ ನಡೆಸಲಾಗುವ ವಿಕೃತಾತಿವಿಕೃತ ಅಮಾನವೀಯ ಲೈಂಗಿಕ ಹಿಂಸಾಚಾರಗಳು ಇಂಥವೆಲ್ಲ ಇಂದು ಮಹಿಳಾ ದೃಷ್ಟಿಕೋನದಿಂದ ವ್ಯಾಪಕ ಚರ್ಚೆಗೆ ಒಳಪಡಬೇಕಾದ ಮಹತ್ವದ ಪ್ರಶ್ನೆಗಳು.

ಈ ಹಿನ್ನೆಲೆಯಲ್ಲಿ ಕುಪ್ಪಳಿಯಲ್ಲಿ ನಡೆದ ಎರಡು ದಿನದ ಕಾರ್ಯಾಗಾರ ಚಾರಿತ್ರಿಕವಾಗಿ ಮಹಿಳೆಯರ ಹೋರಾಟಗಳನ್ನೂ, ಅವರ ಕಲಾಭಿವ್ಯಕ್ತಿಯನ್ನೂ ಬೆಸೆಯುವ ನಿಟ್ಟಿನಲ್ಲಿ ಇದೇ ಮೊಟ್ಟಮೊದಲಿನ ಪ್ರಯತ್ನವೆಂದರೆ ತಪ್ಪಾಗಲಾರದು. ಈ ಮಾತನ್ನು ಹೇಳಿದವರು ಚಳವಳಿ ನಿರತ ಮಹಿಳೆಯರೇ ಎಂಬುದು ಇನ್ನೂ ಮುಖ್ಯವಾದ ಸಂಗತಿ. ರೈತ ಮಹಿಳೆಯರನ್ನು, ಕಾರ್ಮಿಕ ಮಹಿಳೆಯರನ್ನು ಕುರಿತು ಚಳವಳಿಗಳಿಗಾಗಿ ತಾತ್ವಿಕವಾಗಿ ಭಾಷಣಮಾಡಿ ಚೆನ್ನಾಗಿ ನುರಿತವರಾಗಿದ್ದರೂ, ತುಂಬ ಭಿನ್ನವಾದ ಬುದ್ಧಿಜೀವಿತನವೇ ಪ್ರಧಾನವಾದ ಶ್ರೋತೃಗಳಿಗಾಗಿ ತಮ್ಮ ಅನುಭವಗಳನ್ನು ಅಭಿವ್ಯಕ್ತಿಗೊಳಿಸುವುದು ಕೂಡ ಒಂದು ಹೊಸಬಗೆಯ ಅನುಭವ ಆಗಬಲ್ಲದು. "ಅಭಿವ್ಯಕ್ತಿ" ಎಂಬ ತಾತ್ವಿಕ ಪರಿಕಲ್ಪನೆ ಕೂಡ ಈಗ ಜಿಜ್ಞಾಸೆಗೆ ಒಳಗಾಗಬೇಕಿದೆ. ಹೀಗೆಯೇ ಸೃಜನಶೀಲ ಅಭಿವ್ಯಕ್ತಿನಿರತರಿಗೆ ಸಮಾಜದ ಎಲ್ಲ ಸ್ತರದ ಮಹಿಳೆಯರನ್ನು ತಲುಪಬಲ್ಲ ಅಭಿವ್ಯಕ್ತಿಗಾಗಿ ತಡಕಾಡುವ ಸ್ಥಿತಿ ಇದೆ.

ಚಿತ್ರಕಲೆಯಲ್ಲಿ ಮಹಿಳೆಯರ ಅಭಿವ್ಯಕ್ತಿ ಪಾಶ್ಚಾತ್ಯದೇಶಗಳನ್ನು ಮುಟ್ಟಿ ಅಲ್ಲಿನ ಮಲ್ಟಿಪ್ಲೆಕ್ಸ್‌ಗಳಲ್ಲಿ ನಿರಂತರವಾಗಿ ಪ್ರದರ್ಶಿತವಾಗಿ ಮೆಚ್ಚುಗೆ ಪಡೆದ ನಿದರ್ಶನ ನಾವು ಕಂಡಿದ್ದೇವೆ. ಆದರೆ ಇಂಥ ದರ್ಶನದ ಅರ್ಥವೇ ಆಗದ ಸ್ಥಿತಿಯಲ್ಲಿ ನಮ್ಮ ಸಾಮಾನ್ಯ ಮಹಿಳೆಯರು ಹಾಗಿರಲಿ ಕಲಿತ ಮಧ್ಯಮವರ್ಗದ ಮಹಿಳೆಯರೂ ಉಳಿದಿದ್ದೇವೆ. ಇಂಥ ಸಂವಹನದ ಕಳಚಿದ ಕೊಂಡಿಗಳನ್ನು ಜೋಡಿಸಲು ಕಾರ್ಯಾಗಾರಗಳೂ ರೆಪರ್ಟರಿಗಳೂ ಹುಟ್ಟಬೇಕಲ್ಲವೆ? ರಂಗ ನಿರ್ದೇಶಕಿಯರು ಎಲ್ಲಾ ಪುಂವ್ಯವಸ್ಥೆಯಡಿ ಮುರುಟಿಕೊಂಡು ಏಕವ್ಯಕ್ತಿ ಅಭಿನಯದಂಥ ಪಲಾಯನವಾದದಲ್ಲೇ ಪರಿಹಾರ ಕಾಣಬೇಕೆ? ಲೇಖಕಿಯರೇ ಸೃಷ್ಟಿಸಿದ ಕಥೆ, ಕಾವ್ಯ, ನಾಟಕಗಳನ್ನು ಮಹಿಳೆಯರೇ ನಾಟಕಗಳಾಗಿ ಮರುಸೃಷ್ಟಿಸುವ, ನಾಟ್ಯೀಕರಿಸುವ ಕ್ರಿಯೆಗೆ ನಾವೇಕೆ ಕೈಹಾಕುತ್ತಿಲ್ಲ? ಇಂಥ ಇನ್ನೂ ಅನೇಕ ಪ್ರಶ್ನೆಗಳು ಉತ್ತರ ಕಾಣಬೇಕಾಗಿವೆ. ಅಂಥ ಪ್ರಯತ್ನಗಳಾಗಲಿ.

* * *

ಈಚಿನ ಪದ್ಮಪ್ರಿಯಾ ಪ್ರಕರಣದಲ್ಲಿ ಮಹಿಳೆಯೊಬ್ಬಳು ತಾನಿರುವ ಪರಿಸರವನ್ನು ಒಪ್ಪಿಕೊಳ್ಳಲಾರದೇ, ಸ್ವತಂತ್ರವಾಗಿ ಬದುಕಲು ಬಯಸಿ ಹೊರನಡೆದದ್ದೇ ಒಂದು ದೊಡ್ಡ ಅಪರಾಧವೆಂಬಂತೆ ಚಿತ್ರಿಸಿದ ಅಧಿಕಾರಶಾಹಿ, ಪೊಲೀಸ್ ವ್ಯವಸ್ಥೆ ಹಾಗೂ ಮಾಧ್ಯಮಗಳು ತಮ್ಮೊಳಗೆ ಮೆತ್ತಿಕೊಂಡ ಕೊಳಕಿಗೆ ಕನ್ನಡಿ ಹಿಡಿದುಕೊಂಡವು. ಪದ್ಮಪ್ರಿಯಾರಂಥ ಮುಕ್ತ ಮನಸ್ಸಿನ, ದಿಟ್ಟ ಸ್ತ್ರೀಯನ್ನು ಮತ್ತೊಂದು ಹೊರದಾರಿಯಿರದಂತೆ ಬಲೆ ನೇಯ್ದು, ಆಯ್ಕೆಯ ಸ್ವಾತಂತ್ರ್ಯ, ಬದುಕುವ ಸ್ವಾತಂತ್ರ್ಯವಿಲ್ಲದೆ ಜೀವ ತೆಗೆದುಕೊಳ್ಳುವಂತೆ(?) ಮಾಡಿದರು. ಇದಕ್ಕೆಲ್ಲ ಕೊನೆಯೇ ಇಲ್ಲವೆ?

* * *

ಮೈಸೂರಿನ ಯಶೋದಾ ರಾಗೌ ಪ್ರತಿಷ್ಠಾನವು ಕೊಡಮಾಡುವ ಪ್ರಶಸ್ತಿಗೆ ಈ ಸಾಲಿನಲ್ಲಿ ಶ್ರೇಷ್ಠ ಲೇಖಕಿ, ಸ್ತ್ರೀವಾದಿ ಚಿಂತಕಿ ಡಾ. ವಿಜಯಾದಬ್ಬೆಯವರನ್ನು ಆಯ್ಕೆ ಮಾಡಿದೆ. ಅವರಿಗೆ 'ನಮ್ಮ ಮಾನಸ'ದ ಅಭಿನಂದನೆ ಹಾಗೂ ಈ ಸಂಚಿಕೆಯಲ್ಲೊಂದು ಲೇಖನ ಪ್ರಕಟಿಸುವ ಮೂಲಕ ನಮನ.

❑



# ವಿಜಯಾ ದಬ್ಬೆ ಅವರ ಸಾಹಿತ್ಯ: ಒಂದು ನೋಟ

• *ಚಂದ್ರಮತಿ ಸೋಂದಾ*

**ಕ**ರ್ನಾಟಕ ಕಂಡ ಅಪರೂಪದ ಲೇಖಕಿ ವಿಜಯಾ ದಬ್ಬೆ. ಸುಮಾರು ಎರಡೂವರೆ ದಶಕಗಳ ಕಾಲ ಕ್ರಿಯಾಶೀಲ ಬರವಣಿಗೆಯಿಂದ, ಕಾರ್ಯತತ್ಪರತೆಯಿಂದ ಕನ್ನಡ ಸಾಹಿತ್ಯ-ಸಂಸ್ಕೃತಿಗಳಲ್ಲಿ ತಮ್ಮದೇ ಆದ ಒಂದು 'ಛಾಪ'ನ್ನು ಮೂಡಿಸಿದವರು ವಿಜಯಾ. ಸೃಜನಶೀಲ ಲೇಖಕರಾಗಿ, ವಿಮರ್ಶಕರಾಗಿ, ಸ್ತ್ರೀವಾದಿ ಚಿಂತಕರಾಗಿ, ಸಂಘಟಕರಾಗಿ, ಹೋರಾಟಗಾರರಾಗಿ ಅನನ್ಯತೆಯನ್ನು ಮೆರೆದವರು. ಮಹಿಳಾ ಸಾಹಿತ್ಯ, ಸ್ತ್ರೀವಾದಿ ವಿಮರ್ಶೆ ಹಾಗೂ ಮಹಿಳಾ ಚಳವಳಿಗಳನ್ನು ಅವರ ಬದುಕಿನ ಭಾಗವಾಗಿ ಮಾಡಿಕೊಂಡವರು. ತಮ್ಮ ಬರವಣಿಗೆ, ಸಾಮಾಜಿಕ ಚಟುವಟಿಕೆ ಹಾಗೂ ಪ್ರಗತಿಪರ ಚಿಂತನೆಗಳ ಮೂಲಕ ಕರ್ನಾಟಕದ ಸಾಂಸ್ಕೃತಿಕ ಪರಿಸರದ ವಿಸ್ತರಣೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದವರು.

೧೯೭೫-೧೯೯೮ರ ಅವಧಿಯಲ್ಲಿ ಕಾವ್ಯ, ವಿಮರ್ಶೆ, ಸಂಪಾದನೆ, ಸಂಶೋಧನೆ, ಅನುವಾದ, ವ್ಯಕ್ತಿಚಿತ್ರ, ಪ್ರವಾಸಕಥನ ಹೀಗೆ ವಿವಿಧ ಪ್ರಕಾರಗಳ ಅವರ ಇಪ್ಪತ್ತು ಕೃತಿಗಳು ಪ್ರಕಟವಾಗಿವೆ. ಹಳಗನ್ನಡ ಕವಿಗಳ ಕುರಿತ ಬರವಣಿಗೆಯ ಹೊರತಾಗಿ ಉಳಿದೆಲ್ಲವೂ ಸ್ತ್ರೀವಾದೀ ಬರವಣಿಗೆಗಳು. ಶತಮಾನಗಳಿಂದ ಸಾಹಿತ್ಯ, ಸಂಸ್ಕೃತಿ, ಬದುಕು ಎಲ್ಲವನ್ನೂ ಪುರುಷ ದೃಷ್ಟಿಕೋನದಿಂದ ಮಾತ್ರ ಗ್ರಹಿಸಲಾಗುತ್ತಿದೆ, ಇವನ್ನು ಮಹಿಳಾ ದೃಷ್ಟಿಯಿಂದಲೂ ಗ್ರಹಿಸುವ, ಪರಿಭಾವಿಸುವ, ವಿಶ್ಲೇಷಿಸುವ ಅಗತ್ಯವಿದೆ ಎನ್ನುವುದರ ಪ್ರತಿಪಾದನೆ ಅವರ ಬರವಣಿಗೆಯ ಮೂಲಸೆಲೆ. ಮಹಿಳೆಯ ವರ್ತಮಾನ ಸ್ಥಿತಿಯ ಕಾರಣವನ್ನು ಚರಿತ್ರೆಯಲ್ಲಿ ಹುಡುಕುವ, ಅದರ ಬದಲಾವಣೆಗೆ ಸ್ಪಂದಿಸುವ ಅವರ ಚಿಂತನಕ್ರಮ ಸಮಗ್ರವಾದುದು. "ವಸ್ತುಸ್ಥಿತಿಯನ್ನು ಜಾಗತಿಕ ಪರಿಸರದಲ್ಲಿಟ್ಟು, ಒಟ್ಟು ಮಾನವ ಇತಿಹಾಸದ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದರಿಂದ ಇಲ್ಲಿನ ವಿಚಾರ ಭಾವಗಳಿಗೆ ಸಾರ್ವತ್ರಿಕತೆಯುಂಟಾಗುತ್ತದೆ. ಸ್ತ್ರೀವಿಮೋಚನೆಯ ಪಕ್ಷವಹಿಸುವಂತೆ ತೋರುವ ಕವನಗಳ ಹಿಂದೆ ಕೂಡ ಎಲ್ಲ ಮಾನವರ ಒಳಿತನ್ನು ಬಯಸುವ ಬದುಕಿನ ಒಟ್ಟು ಅಂದವನ್ನು ಗ್ರಹಿಸಿ ಅಭಿವ್ಯಕ್ತಿಸುವ ಎಚ್ಚರವಿದೆ" ಎಂಬ ವಿಜಯಾ ಅವರ 'ಇರುತ್ತವೆ' ಸಂಕಲನದ ಕವನಗಳನ್ನು ಕುರಿತ ಡಾ. ಬಿ.ಎನ್. ಸುಮಿತ್ರಾಬಾಯಿ ಅವರ ಅಭಿಪ್ರಾಯ ಅವರ ಎಲ್ಲ ಬರವಣಿಗೆಗೂ ಅನ್ವಯಿಸುತ್ತದೆ.

'ಇರುತ್ತವೆ', 'ನೀರು ಲೋಹದ ಚಿಂತೆ', 'ತಿರುಗಿನಿಂತ ಪ್ರಶ್ನೆ' ಈ ಮೂರೂ ಸಂಕಲನಗಳ ಹೆಚ್ಚಿನ ಕವನಗಳು ಹೆಣ್ಣಿನ ಅಧೀನ ಸ್ಥಿತಿಗೆ ಕಾರಣವಾಗಿರುವ ಸಾಮಾಜಿಕ ಧೋರಣೆಯನ್ನು ಪ್ರಶ್ನಿಸುತ್ತವೆ. ಸಮಾಜದಲ್ಲಿ ಆಳವಾಗಿ ಬೇರೂರಿರುವ ಪಿತೃಪ್ರಧಾನ ಮೌಲ್ಯಗಳಿಗೆ ಹಾಗೂ ಲಿಂಗಾಧರಿತ ಅಸಮಾನತೆಗಳಿಗೆ ವ್ಯಂಗ್ಯ, ವಿಡಂಬನೆ, ಕುಹಕಗಳ ಚುಚ್ಚುಮದ್ದು ನೀಡುವುದು ಅವರ ಕವನಗಳ ವಿಶಿಷ್ಟತೆ. **ಪ್ರಗತಿ, ನಾರೀಮಣಿಗೊಂದು ಕಿವಿಮಾತು, ಮಹೋದರೆ, ತಿರುಗಿನಿಂತ ಪ್ರಶ್ನೆ, ನಿರ್ದೇಶಕ ಉವಾಚ** ಕವನಗಳನ್ನು ಈ ದೃಷ್ಟಿಯಿಂದ ಗಮನಿಸಬಹುದು.

ವೇದಿಕೆಯಲ್ಲಿ ಪ್ರಗತಿಪರ ಪೋಸು ಕೊಡುವವರ ಗೋಸುಂಬೆತನವನ್ನು 'ಪ್ರಗತಿ' ಕವನ ಅನಾವರಣಗೊಳಿಸುತ್ತದೆ;

...... ತನ್ನ ಮನೆಯಾಕೆ
ಹೊರಗೆ ದುಡಿದು, ಕಯ್ಯ ಬಟ್ಟಲು ತೆಗೆದು ತೊಳೆದು
ನರಳಿ ಹೆರುವುದನ್ನು ಕಂಡು
ಈ ಸೋಷಿಯಲಿಸ್ಟ್ ಪಕ್ಷದ ಕಾರ್ಯದರ್ಶಿ
ಅಯ್ಯೋ ಎಂದಿದ್ದಾನೆ.

ಒಳಗು ಹೊರಗು ದುಡಿತದ ಮಧ್ಯೆ
ಆರು ಮಕ್ಕಳ ತಾಯಿ

ಅವನೇನು ಕೃತಘ್ನನಲ್ಲ
ಸದ್ಯದಲ್ಲೇ ಬಂದೀತು
ಅವಳಿಗರ್ಪಿಸಿದ ಕವನ ಸಂಕಲನ.

ಮಹಿಳೆಯ ಬಗೆಗೆ ತೋರಿಕೆಯ ಸಹಾನುಭೂತಿ ತೋರಿಸುವವರ ಆಷಾಢಭೂತಿತನವನ್ನು ನವಿರಾಗಿ ವಿಡಂಬಿಸುತ್ತದೆ ಈ ಕವನ. ಪ್ರಗತಿಪರ ಎನ್ನುವ ಸ್ವಯಂಘೋಷಿತರ ವೈಯಕ್ತಿಕ ಬದುಕಿನ ಸೋಗಲಾಡಿತನವನ್ನು ಇಲ್ಲಿ ಬಯಲಿಗೆಳೆಯಲಾಗಿದೆ.

ಮೇಲುನೋಟಕ್ಕೆ ಮಹಿಳೆ ಬಹಳ ಸುರಕ್ಷಿತಳಾಗಿರುವಂತೆ ತೋರುತ್ತದೆ. ಆಕೆ ಅಬಲೆ ಎಂದು ಅವಳ ಸಂರಕ್ಷಣೆಯನ್ನು ಪುರುಷನಿಗೆ ನೀಡಿ, ಅವನ ಹೆಚ್ಚುಗಾರಿಕೆಯನ್ನು ಮೆರೆದಿರುವ ಸಮಾಜ ವ್ಯವಸ್ಥೆಯ ವ್ಯಂಗ್ಯವನ್ನು ಅವರ **ನಾರೀಮಣಿಗೊಂದು ಕಿವಿಮಾತು** ಕವನ ಅನಾವರಣಗೊಳಿಸುತ್ತದೆ. 'ನಿರ್ಭಯವಾಗಿ ನಿಶ್ಚಿಂತೆಯಿಂದಿರಿ' ಎಂದು ಪ್ರಾರಂಭವಾಗುವ ಕವನ ಮುಂದುವರಿದು 'ರಾವಣ **ದುಶ್ಶಾಸನರು ಹುಟ್ಟಿ/ ನಿಮ್ಮ ಹೊತ್ತು ಸೀರೆ ಎಳೆದರೂ/ ರಾಮಕೃಷ್ಣರಿದ್ದಾರೆ/ ನಿಮ್ಮ ವಸ್ತ್ರ ಅಕ್ಷಯವಾಗಿಸಿ/**

**ಅಗ್ನಿ ಪರೀಕ್ಷೆ ಮಾಡಿ/ ಮೀಸೆ ತಿರುವಿಕೊಳ್ಳುವ ಭೂಪರು'** ಎಂದು ವಿರಮಿಸುತ್ತದೆ. ಒಮ್ಮೆ ಮಹಿಳೆ ಸಂಕಷ್ಟಕ್ಕೆ ಸಿಲುಕಿದರೂ ಅವಳನ್ನು ರಕ್ಷಿಸುವಂಥ ವೀರಾಧಿವೀರ ಪುರುಷರಿದ್ದಾರೆ ಎನ್ನುವ ವ್ಯಂಗ್ಯದ ಮೂಲಕ ಮಹಿಳೆಯ ಬಗೆಗಿನ ಸಮಾಜದ ದೃಷ್ಟಿಕೋನವನ್ನು ಛೇಡಿಸುತ್ತದೆ. ಹೀಗೆ ರಕ್ಷಿಸುವುದಾದರೂ ಯಾವಾಗ? **'ನೀವು ಕತ್ತೆತ್ತದಿರುವವರೆಗೆ'** ಎನ್ನುವ ಎಚ್ಚರಿಕೆ ನೀಡಲು ಕವಿ ಮರೆಯುವುದಿಲ್ಲ.

ಇತಿಹಾಸದುದ್ದಕ್ಕೂ ಮಹಿಳೆ ಎಲ್ಲವನ್ನೂ ಅರಗಿಸಿಕೊಳ್ಳುತ್ತಲೇ ಬಂದಿದ್ದಾಳೆ. ಅವಳು ಪ್ರಶ್ನಿಸದೆ, ತನ್ನ ಅನಿಸಿಕೆಯನ್ನು, ನೋವನ್ನು ಹೊರಹಾಕದೆ ಬಾಯ್ಮುಚ್ಚಿ ಸಹಿಸುತ್ತ ಬಂದಿರುವುದನ್ನು **ಮಹೋದರೆ ಮತ್ತು ತಿರುಗಿನಿಂತ ಪ್ರಶ್ನೆ** ಕವನಗಳು ಪ್ರಶ್ನಿಸುತ್ತವೆ. ಮಹಿಳೆ ಸಹಿಸುತ್ತ ಬಂದಿರುವ ಪ್ರಮಾಣ ಎಷ್ಟೆಂದರೆ ಅವಳು ಎಲ್ಲವನ್ನೂ ಹೊಟ್ಟೆಯಲ್ಲಿಟ್ಟುಕೊಂಡು 'ಮಹೋದರೆ'ಯೇ ಆಗಿದ್ದಾಳೆ ಎನ್ನುವಲ್ಲಿನ ಮೊನಚು ಗಮನಾರ್ಹ. ಸೀತೆ ಸಾಮಾನ್ಯ ಕುಟುಂಬದ ಹೆಣ್ಣಾಗಿರಲಿಲ್ಲ. **'ಅಪ್ಪ ಜನಕ ಕಲಿಸಿದ್ದ ಅಕ್ಷರವಿತ್ತು/ ಸಾಕವ್ವೆಯರು ಹೇಳಿಕೊಟ್ಟ ಹಾಡಮಟ್ಟಿತ್ತು/ ಸುತ್ತಮುತ್ತ ತಾಡಪತ್ರ ಚೆಲ್ಲಿತ್ತು/ ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು'** ಎಂದು ಸೀತೆಯ ಮೌನಕ್ಕೆ ಪ್ರತಿಕ್ರಿಯಿಸುವ ಕವಿ **'ಕೈ ತುಂಬ ಬಿಡುವಿತ್ತು/ ಇನ್ನೇನು ಬೇಕಿತ್ತು?'** ಎಂದು ಪ್ರಶ್ನಿಸುವ ಮೂಲಕ ಅಭಿವ್ಯಕ್ತಿಗೆ ಹೊರಗಿನ ಸಲಕರಣೆಗಳು ಇದ್ದರಷ್ಟೇ ಸಾಲದು ಎನ್ನುವತ್ತ ಗಮನಸೆಳೆಯುತ್ತಾರೆ. ಹಾಗಾಗಿ ಸೀತೆಗೆ ಕೇಳಿದ್ದ ಪ್ರಶ್ನೆಗಳು 'ತಿರುಗಿ ನಿಂತವು'. ಮಹಿಳಾ ಅಭಿವ್ಯಕ್ತಿಯ ವಿಷಯದಲ್ಲಿ ವರ್ತಮಾನ ಸ್ಥಿತಿ ತೀರ ಭಿನ್ನವಲ್ಲ ಎನ್ನುವ ಸೂಚನೆ ಇಲ್ಲಿದೆ.

ಲಿಂಗಾಧರಿತ ತಾರತಮ್ಯವು ದಿನನಿತ್ಯದ ಬದುಕಿನಲ್ಲಿ ಹಾಸುಹೊಕ್ಕಾಗಿರುವ ರೀತಿಯನ್ನು 'ನಿರ್ದೇಶಕ ಉವಾಚ' ತೆರೆದಿಡುತ್ತದೆ. **'ಕಚೇರಿಯಲ್ಲೊಬ್ಬಳು ವಿವಾಹಿತೆ/ ಪರಪುರುಷನೊಡನೆ/ಸಲ್ಲಾಪವಾಡಿದಳಂತೆ/ ನಿರ್ದೇಶಕರು ಕೇಳಿದರು 'ಇದು ಸರಿಯೇನ್ರಿ'?**

**ಅದೇ ಕಚೇರಿಯಲ್ಲಿ ಸರ್ವಪಲ್ಲಿಯವರ/ ಮುಕ್ತ ಲೈಂಗಿಕತೆಯ ಚರ್ಚೆಯಲ್ಲಿ/ ಅದೇ ನಿರ್ದೇಶಕರು ಹೇಳಿದರು: 'ಅದು ಮೋರ್ ಹ್ಯೂಮನ್'.** ಲೈಂಗಿಕತೆಯ ವಿಷಯದಲ್ಲಿ ಮಹಿಳೆ ದಾಟಬಾರದ ಬೇಲಿಗಳು ಸಾಕಷ್ಟಿವೆ. ಇದು ಪುರುಷನಿಗೆ ಅನ್ವಯಿಸುವಂಥದಲ್ಲ. ಅಳೆಯುವ ಮಾಪನ ಇಬ್ಬರಿಗೂ ವಿಭಿನ್ನ ಯಾಕೆ ಎನ್ನುವ ಪ್ರಶ್ನೆಯನ್ನು ಕವನ ಎತ್ತುತ್ತದೆ.

ಅವರ ಬರವಣಿಗೆಯ ಇನ್ನೊಂದು ಲಕ್ಷಣ ವೈಯಕ್ತಿಕವಾದುದನ್ನು ಸಾರ್ವಜನಿಕಗೊಳಿಸುವ ಗುಣ. 'ಫರೀದಾ ಬೇಗಂ' ಕವನ ಸಮಸ್ಯೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸುತ್ತದೆ. ಮೇಲುನೋಟಕ್ಕೆ ಇದು ಮುಸಲ್ಮಾನ ಹೆಣ್ಣುಮಗಳ ವಿಷಯವನ್ನು ಹೇಳುತ್ತಿರುವಂತೆ ಕಂಡರೂ, **'ಫರೀದಾ ಬೇಗಂ ಎಂದೂ ಎಲ್ಲೂ ಘೋಷ ಬಿಚ್ಚಿದ್ದನ್ನು ಜನ ಕಂಡಿಲ್ಲ'** ಎನ್ನುವಲ್ಲಿ ಕವನ ಅರ್ಥ ಸಾಧ್ಯತೆಯನ್ನು ಹಿಗ್ಗಿಸುತ್ತದೆ. **'ಹಗಲು ರಾತ್ರಿ, ಕಾಲೇಜು, ಫ್ಯಾಕ್ಟರಿ ರಸ್ತೆ/ ಎಲ್ಲೂ ಎಲ್ಲೂ ಆಕೆ ಘೋಷ ಬಿಚ್ಚಿದ್ದನ್ನು ಜನ ಕಂಡಿಲ್ಲ'** ಎನ್ನುವ ಸಾಲುಗಳು ಆಕೆ ಮಹಿಳೆಯ ಪ್ರತಿನಿಧಿ ಎನ್ನುವುದನ್ನು ಸ್ಪಷ್ಟಪಡಿಸುತ್ತವೆ. ಜೊತೆಗೆ ಅವಳ ಸ್ಥಿತಿ ಕಾಲಾತೀತ ಎನ್ನುವತ್ತ ಗಮನ ಸೆಳೆಯುತ್ತವೆ.

ಒಂದು ಕೃತಿ ಎಷ್ಟೇ ಚಾರಿತ್ರಿಕ ಅಗತ್ಯದ ಹಿನ್ನೆಲೆಯಲ್ಲಿ ಜನ್ಮತಾಳಿದ್ದರೂ ಕಲಾತ್ಮಕತೆಯ ಹೊರತಾದ ಅಂಶವನ್ನಷ್ಟೇ ಪರಿಗಣಿಸಿ ಅದನ್ನು ಸಾಹಿತ್ಯ ಕೃತಿಯೆಂದು ಪರಿಗಣಿಸುವುದು ಸರಿಯಾದ ಕ್ರಮವಲ್ಲ. 'ಪ್ರತಿಮೆ, ಭಾಷೆ, ಲಯ ಇವುಗಳ ವೈಶಿಷ್ಟ್ಯಪೂರ್ಣ ಬೆಸುಗೆಯಿಂದ ವಿಜಯಾ ಅವರ ಕಾವ್ಯ ಸ್ವೋಪಜ್ಞತೆಯಿಂದ ಹೊಳೆಯುತ್ತದೆ. ಭಾಷೆ ಭಾವಗಳ ಸೂಕ್ಷ್ಮತೆ, ಪ್ರತಿಮೆಗಳ ನಾಟಕೀಯತೆ ಎರಡೂ ಕೂಡಿದಾಗ ಕಾವ್ಯ ಸಾರ್ಥಕವಾಗುತ್ತದೆ' ಎನ್ನುವ ಶಾಂತಿನಾಥ ದೇಸಾಯಿಯವರ ಅಭಿಪ್ರಾಯ ವಿಜಯಾ ಅವರ ಕಾವ್ಯದ ಸತ್ವವನ್ನು ಅನಾವರಣಗೊಳಿಸುತ್ತದೆ. 'ಮಾನವೀಯ ಸಂಬಂಧಗಳು ಜಾಗತಿಕ ಪರಿಸರದ ಒಟ್ಟು ಮಾನವನ ಇತಿಹಾಸದ ಹಿನ್ನೆಲೆಯಲ್ಲಿ ಆಳವಾಗಿ ವಿಶ್ಲೇಷಿಸಲ್ಪಡುತ್ತವೆ. ವಸ್ತುಸ್ಥಿತಿಯ ಹಲವು ಪದರಗಳು, ತೋರಿಕೆಯ ಒಳಗಿನ ಸತ್ಯದ ಹುಡುಕಾಟ ಇಲ್ಲಿ ಮುಖ್ಯ ಕಾಳಜಿ. ನವ್ಯದ ವಸ್ತುನಿಷ್ಠತೆ, ಸಂಕೀರ್ಣತೆ, ಭಾಷೆ-ಶಿಲ್ಪ ಇತ್ಯಾದಿ ಒಳ್ಳೆಯ ಅಂಶಗಳನ್ನು ನವೋದಯದ ಭಾವತೀವ್ರತೆ, ಆರ್ದ್ರತೆ, ಲಾಲಿತ್ಯಗಳೊಂದಿಗೆ ಬೆಸೆಯಬಲ್ಲ ಕಲೆಗಾರಿಕೆ ವಿಜಯಾ ಅವರದು' ಎಂದು ಸುಮಿತ್ರಾಬಾಯಿಯವರು ವಿಜಯಾ ದಬ್ಬೆಯವರ ಕಾವ್ಯದ ವಿಶಿಷ್ಟತೆಯನ್ನು ಗುರುತಿಸಿದ್ದಾರೆ.

'ಮಹಿಳೆ ಸಾಹಿತ್ಯ ಸಮಾಜ' ಹಾಗೂ 'ನಾರಿ : ದಾರಿ-ದಿಗಂತ' ವಿಜಯಾ ದಬ್ಬೆಯವರ ಧೋರಣೆಯನ್ನು ಪ್ರತಿಪಾದಿಸುವ ಸಂಕಲನಗಳು. ಮೊದಲನೆಯ ಸಂಕಲನದ ೧೭ ಲೇಖನಗಳೂ ಸಾಹಿತ್ಯ ಮತ್ತು ಸಮಾಜದಲ್ಲಿ ಬಿಂಬಿತವಾಗಿರುವ ಮಹಿಳೆಯ ಬಗೆಗಿನ ದೃಷ್ಟಿಕೋನವನ್ನು ಕುರಿತು ಚರ್ಚಿಸುತ್ತವೆ. ವಿಜಯಾ ಅವರು ಯಾವುದೇ ವಿಷಯವನ್ನು ಕುರಿತು ಬರೆಯಲಿ ಅದರ ಎಲ್ಲ ಮಗ್ಗುಲುಗಳನ್ನು ಹಿಡಿದಿಡಲು ಪ್ರಯತ್ನಿಸುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಪ್ರತಿಭಟನೆ ಇತ್ತೀಚಿನದು ಎನ್ನುವ ವಿಮರ್ಶಕರ ಅಭಿಪ್ರಾಯವನ್ನು 'ಮಹಿಳಾ ಸಾಹಿತ್ಯದಲ್ಲಿ ಪ್ರತಿಭಟನೆ' ಲೇಖನದಲ್ಲಿ ಅಲ್ಲಗಳೆಯುತ್ತಾರೆ. "ವಚನ ಸಾಹಿತ್ಯವನ್ನು ಬಿಟ್ಟರೆ ಉಳಿದೆಲ್ಲ ಸಂದರ್ಭಗಳಲ್ಲಿ ಹೆಣ್ಣು ಅಧೀನಗಳಾಗಿಯೇ ಯೋಚನೆ ಮಾಡಿ ಬರೆದಿದ್ದನ್ನು ಗುರುತಿಸುತ್ತೇವೆ" ಎಂಬ ತಿಳಿವಳಿಕೆ ಚರಿತ್ರೆಗೆ ನ್ಯಾಯ ಒದಗಿಸಲಾರದೆಂದು ತೋರುತ್ತದೆ ಎಂದು ಹೇಳುತ್ತ, ದುಡಿಯುವ ಗ್ರಾಮೀಣ ಹೆಣ್ಣಿನ ಆತ್ಮವಿಶ್ವಾಸದ ಸಹಜದನಿಯಲ್ಲಿ ಅವರ ಪ್ರತಿಭಟನೆಯ ಸತ್ವ ಕಾಣಿಸಿರುವುದನ್ನು ಜನಪದ ಅಭಿವ್ಯಕ್ತಿಯ ಉದಾಹರಣೆಗಳ ಮೂಲಕ ಸಾಬೀತುಪಡಿಸುವಲ್ಲಿ ಅವರ ಸ್ವೋಪಜ್ಞತೆ ಅಡಗಿದೆ. ವಚನ ಸಾಹಿತ್ಯ ಸಂದರ್ಭದಲ್ಲಿ ಮಹಿಳೆಯ ಪ್ರವೇಶಕ್ಕೆ ಸಾಮೂಹಿಕ ಅವಕಾಶ ದೊರೆತಿರುವುದನ್ನು ಪ್ರಸ್ತಾಪಿಸಿ, ಮೊದಲ ಬಾರಿಗೆ ಮಹಿಳೆಗೆ ಆಧ್ಯಾತ್ಮಿಕ ವಲಯದಲ್ಲಿ ಹೆಣ್ಣು-ಗಂಡಿನ ನಡುವಿನ ಸಮಾನತೆಯನ್ನು ಒಪ್ಪಿದ ತಾತ್ವಿಕನೆಲೆ ಮಹಿಳೆಯರ ಲೌಕಿಕನೆಲೆಯ ಪ್ರತಿಭಟನೆಯನ್ನು ಬೆಂಬಲಿಸಿದ್ದಕ್ಕೆ ಅಕ್ಕನ ಬದುಕನ್ನು ಉದಾಹರಣೆಯಾಗಿ ನೋಡುವ ಅವರ ನಿಲುವು ಸಂಗತವಾದುದೇ. ವೈಷ್ಣವ ಭಕ್ತಿಮಾರ್ಗದಲ್ಲಿ ಸಾಮೂಹಿಕ ಪ್ರವೇಶಕ್ಕೆ ಅವಕಾಶ ಇಲ್ಲದಿದ್ದರೂ ವೈಯಕ್ತಿಕ ತುಡಿತದಿಂದ ಚಲುವಾಂಬೆ, ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಮುಂತಾದವರು ಒಳಪ್ರವೇಶಿಸಿದ್ದು ಕೂಡ ಪ್ರತಿಭಟನೆಯ ಒಂದು ಮಾದರಿಯೇ.

ವಚನಕಾರ್ತಿಯರು, ಹೊನ್ನಮ್ಮ ಮತ್ತು ತ್ರಿವೇಣಿಯರ ಬರವಣಿಗೆಗಳ ಮಹಿಳಾ ನೆಲೆಯನ್ನು ಸ್ತ್ರೀವಾದ ದೃಷ್ಟಿಯಿಂದ ವಿಮರ್ಶಿಸಲಾಗಿದೆ. ಆ ಕೃತಿಗಳು ಜನ್ಮತಳೆದ ಕಾಲದ ಹಿನ್ನೆಲೆಯಲ್ಲಿ ಅವುಗಳ ಪ್ರಸ್ತುತತೆಯನ್ನು ವಿಶ್ಲೇಷಣೆಗೆ ಒಡ್ಡುವಾಗ ಚಾಲ್ತಿಯಲ್ಲಿದ್ದ ಸಾಹಿತ್ಯ ವಿಮರ್ಶೆಯ ಮಾನದಂಡಕ್ಕೆ ಬದಲಾಗಿ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ವಿಮರ್ಶಾ ಮಾರ್ಗವನ್ನು ಅನುಸರಿಸಿದ್ದಾರೆ. ಸ್ತ್ರೀವಾದಿ ವಿಮರ್ಶೆ ಮಹಿಳೆಯರಿಂದ ರಚಿತವಾದ ಕೃತಿಗಳನ್ನಷ್ಟೇ ವಿಮರ್ಶಿಸುವುದಿಲ್ಲ. ಪುರುಷ ನಿರ್ಮಿತ ಸಾಹಿತ್ಯವನ್ನೂ ಸ್ತ್ರೀವಾದಿ ನೆಲೆಯಿಂದ ವಿಶ್ಲೇಷಿಸಲು ಬಯಸುತ್ತದೆ. ಸಾಹಿತ್ಯವಿರಲಿ, ಸಮಾಜ ಕುರಿತ ದೃಷ್ಟಿಕೋನವಿರಲಿ ಅದಕ್ಕೂ ಜೈವಿಕತೆಗೂ ಸಂಬಂಧ ಕಲ್ಪಿತವಾಗಬೇಕಿಲ್ಲ ಎನ್ನುವ ಸ್ತ್ರೀವಾದಿ ಧೋರಣೆಯನ್ನು ಒಪ್ಪುವ ವಿಜಯಾ ಶಿವರಾಮ ಕಾರಂತ, ನಿರಂಜನ ಹಾಗೂ ಚದುರಂಗರ ಕೃತಿಗಳನ್ನು ವಿಮರ್ಶಿಸಿದ್ದಾರೆ. ಆ ಲೇಖನಗಳ ತಲೆಬರಹವೇ ವಿಜಯಾ ಅವರು ಆಯಾ ಲೇಖಕರನ್ನು ಗ್ರಹಿಸಿದ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

ಬದುಕಿಗೆ ಹೆದರಿ ಓಡುವ, ಸಾಯುವ, ವಿರಕ್ತಿಯ ಮುಸುಕಿನಲ್ಲಿ ಅಲೆಯುವ, ವಿಲಾಸದಲ್ಲಿ ಕರ್ತವ್ಯ ಮರೆತ ಗಂಡಸರು ಕಾರಂತರ ಕೃತಿಗಳಲ್ಲಿ ಸಾಕಷ್ಟು ಕಾಣಸಿಗುತ್ತಾರೆ. ಇದಕ್ಕೆ ವೈರುಧ್ಯದ ನೆಲೆಯದು ಸ್ತ್ರೀಯರ ಬದುಕು. ಮಹಿಳೆಯರ ಜೀವನಶ್ರದ್ಧೆ, ಕರ್ತವ್ಯನಿಷ್ಠೆ, ಕಾರ್ಯತತ್ಪರತೆಗಳು ಕಾರಂತರ ಮೆಚ್ಚಿಗೆಗೆ ಪಾತ್ರವಾಗಿರುವುದನ್ನು ಗುರುತಿಸುತ್ತ ಬರಲಾಗಿದೆ. ಹಿಂದಿನ ತಲೆಮಾರುಗಳ ಶ್ರದ್ಧೆ, ವಿಚಾರ, ನಂಬಿಕೆಗಳನ್ನು ಆದರಿಸುವ ಕಾರಂತರು ಅನಂತರದ ತಲೆಮಾರಿನವರ ಬಗೆಗೆ ಅಷ್ಟು ನಂಬಿಕೆ ತೋರದಿರುವುದನ್ನು

ಗಮನಿಸುವ ವಿಜಯಾ "ಈ ಗ್ರಾಮೀಣ ಮಹಿಳೆಯರು ಪ್ರತಿಮಿಸುವ ಅನೇಕ ಮೌಲ್ಯಗಳು ಸಾಂದರ್ಭಿಕ ಮಿತಿಯನ್ನು ದಾಟಿ ಬಾಳುವಂಥವು. ಸಹನೆ, ತ್ಯಾಗ, ಶ್ರದ್ಧೆಗಳು ಒಟ್ಟು ಮನುಕುಲದ ಮೌಲ್ಯಗಳಾಗಿ ಬದುಕನ್ನು ಶ್ರೀಮಂತಗೊಳಿಸುವ ಅನಿವಾರ್ಯ ಅಗತ್ಯಗಳು. ಆದರೆ ಈ ಮೌಲ್ಯಗಳನ್ನು ಮಹಿಳೆಯರ ಬದುಕಿನಿಂದ ಮಾತ್ರ ನಿರೀಕ್ಷಿಸುವ ಸ್ಥಿತಿ ಆರೋಗ್ಯಕರವಾದುದಲ್ಲ. ಆ ಮೌಲ್ಯಗಳ ಮೂರ್ತರೂಪಗಳಂತೆ ಬಾಳಿದ ಮಹಿಳೆಯರ ಬದುಕು ದೊಡ್ಡದಿದ್ದೀತು. ಅದರಿಂದ ಸಮಾಜ ಪ್ರಯೋಜನ ಪಡೆದೀತು. ಆದರೆ ಜೀವನ ಸುಖವನ್ನು ಬಲಿಗೊಟ್ಟು, ಈ ಮೌಲ್ಯಗಳನ್ನು ಕಾಯಬೇಕಾಗಿ ಬರುವ ಸಂದರ್ಭ ನಮ್ಮ ಬದುಕಿನ ಕ್ರೂರ, ಅಸಹ್ಯ ಮುಖಗಳನ್ನು ಕಾಣಿಸುತ್ತದೆ" ಎನ್ನುವುದರ ಮೂಲಕ ಗ್ರಾಮೀಣ ಮಹಿಳೆಯರ ಬಗೆಗೆ ಮಾತ್ರ ತೋರುವ ಮೆಚ್ಚಿಗೆ ಅಪಾಯಕ್ಕೆ ಎಡೆಮಾಡಬಹುದಾದ ಸಾಧ್ಯತೆಯನ್ನು ಗಮನಕ್ಕೆ ತರುತ್ತಾರೆ.

ಇತರ ಪ್ರಗತಿಶೀಲ ಲೇಖಕರಿಂದ ನಿರಂಜನರು ಹೇಗೆ ಭಿನ್ನ ಎನ್ನುವುದನ್ನು 'ಲಿಂಗಾಧರಿತ ಅಸಮಾನತೆ : ನಿರಂಜನರ ದೃಷ್ಟಿಕೋನ' ಲೇಖನದಲ್ಲಿ ಸಾಧಾರವಾಗಿ ಚರ್ಚಿಸಿದ್ದಾರೆ. "ಅನೇಕ ಪ್ರಗತಿಶೀಲ ಲೇಖಕರ ಸತ್ವದಲ್ಲಿ ಪ್ರಗತಿಶೀಲತೆಯ ಹೊಳಹುಗಳಿದ್ದವೇ ಹೊರತು ಅವರ ಚಿಂತನದ್ರವ್ಯವೇ ಪೂರ್ಣವಾಗಿ ಪ್ರಗತಿಶೀಲ ಸತ್ವದಿಂದದ್ದಾಗಿರಲಿಲ್ಲ" ಎಂದು ಪ್ರಗತಿಶೀಲ ಬರವಣಿಗೆಯ ಮಿತಿಯನ್ನು ಗುರುತಿಸುವ ವಿಜಯಾ 'ಅಪವಾದದ ಬೆಳಕಾಗಿ ಹೊಳೆಯುತ್ತವೆ ನಿರಂಜನರ ಕೃತಿಗಳು' ಎನ್ನುತ್ತಾರೆ. ಕೃತಿಯಲ್ಲಿ ಬರುವ ಘಟನೆಗಳು ಸನ್ನಿವೇಶಗಳು ಕೆಲವೊಮ್ಮೆ ಲಿಂಗಾಧರಿತ ತಾರತಮ್ಯವನ್ನು ಬಿಚ್ಚಿಡುತ್ತವೆ; ಲೇವಡಿ ಮಾಡುತ್ತವೆ. ಕೃತಿಯ ಸಂವಿಧಾನ ಹಾಗೂ ಸ್ವರೂಪಗಳ ಭಾಗವಾಗುವ ಈ ಅಂಶ ಎಲ್ಲಿಯೂ ಢಾಳಾಗಿ ಕಾಣಿಸಿಕೊಳ್ಳದೆ ತನ್ನ ಗುರಿ ತಲುಪುವುದನ್ನು ವಿಜಯಾ ಗಮನಿಸುತ್ತಾರೆ. ಅಭಯ, ನಂದಗೋಕುಲ, ಸೌಭಾಗ್ಯ, ಹಾಗೂ ಬನಶಂಕರಿ ಕಾದಂಬರಿಗಳ ಹಿನ್ನೆಲೆಯಲ್ಲಿ ನಿರಂಜನರ ವಿಚಾಧಾರೆಯನ್ನು ಪರಿಶೀಲಿಸುತ್ತ ಹೋಗುತ್ತಾರೆ. 'ಅಸಮಾನ ನೆಲೆಯಿಂದ ಉದ್ಭವವಾಗುವ ಹತ್ತಾರು ಸಮಸ್ಯೆಗಳನ್ನು ಪ್ರತಿಮಿಸುವ ನಿರಂಜನರ ಸ್ತ್ರೀಪಾತ್ರ ಚಿತ್ರಣದಲ್ಲಿ ವಾಸ್ತವಪ್ರಜ್ಞೆ ಮತ್ತು ಬಹುಕೋನ ಗ್ರಹಿಕೆ ಬಹುಮುಖ್ಯವಾಗಿ ಕೆಲಸಮಾಡುತ್ತದೆ' ಎನ್ನುವ ಹೊಸ ಹೊಳಹನ್ನು ಅವರ ವಿಮರ್ಶೆ ಕಾಣಿಸುತ್ತದೆ. ನಿರಂಜನರ ಕೃತಿಗಳ ಪ್ರಗತಿಶೀಲ ಗುಣವನ್ನು ಸ್ತ್ರೀವಾದಿ ನಿಲುವಿನಿಂದ ಅರ್ಥೈಸುತ್ತಾರೆ. ಲಿಂಗಾಧರಿತ ಅಸಮಾನತೆ ಕುರಿತ ನಿರಂಜನರ ದೃಷ್ಟಿಕೋನದ ಜೊತೆಗೆ 'ಒಳಗಿನ ದುಡಿಮೆಯ ಕ್ಷೇತ್ರಗಳನ್ನು ಗಂಡು ಮತ್ತು ಹೆಣ್ಣು ಮುಕ್ತವಾಗಿ ಹಂಚಿಕೊಳ್ಳುವುದು ಅವರಿಬ್ಬರ ಆರೋಗ್ಯಕ್ಕೂ ತನ್ಮೂಲಕ ಸಮಾಜದ ಆರೋಗ್ಯಕ್ಕೂ ಅವಶ್ಯವಾಗಿದೆ. ಈ ವಿನಿಮಯ, ಸಾಹಚರ್ಯ ಹೆಚ್ಚಿದಂತೆ ಹೆಂಗಸಿಗೆ ಸಂಬಂಧಿಸಿದಂತೆ ಇರುವ ಅರ್ಥಹೀನ, ಜೀವವಿರೋಧಿ ಮೌಲ್ಯಗಳು ಕುಸಿದು ಹೊಸ ಮಹಿಳೆಯ, ಹೊಸ ಮನುಷ್ಯನ, ಹೊಸ ಚರಿತ್ರೆಯ ಪುಟಗಳಿಗೆ ದಾರಿಯಾಗುತ್ತವೆ' ಎನ್ನುವ ತಮ್ಮ ಆಶಯವನ್ನು ಸೇರಿಸುತ್ತಾರೆ. 'ನಿರಂಜನರ ಬರಹಗಳು ಅಂದಿಗೂ ಇಂದಿಗೂ ಮುಂದಿಗೂ ಪ್ರಸ್ತುತ' ಎನ್ನುವ ವಿಜಯಾ ದಬ್ಬೆಯವರ ಮಾತು ನಿರಂಜನರ ಬರವಣಿಗೆಯ ಸತ್ವವನ್ನು ಅನಾವರಣಗೊಳಿಸುತ್ತದೆ.

ಸ್ತ್ರೀಯರ ಆಲೋಚನೆ, ನಡವಳಿಕೆ, ಬದುಕಿನ ರೀತಿ-ನೀತಿಗಳು ಜಾತಿವರ್ಗಗಳ ಹಿನ್ನೆಲೆಯಲ್ಲಿ ರೂಪುಗೊಳ್ಳುತ್ತವೆ ಎನ್ನುವುದಾಗಿ ಸ್ತ್ರೀವಾದ ತಿಳಿಯುತ್ತದೆ. ಚದುರಂಗರ 'ವೈಶಾಖ' ಕಾದಂಬರಿಯ ಸ್ತ್ರೀಪಾತ್ರಗಳನ್ನು ಈ ಹಿನ್ನೆಲೆಯಲ್ಲಿ ಪರಾಮರ್ಶೆಗೆ ಒಡ್ಡುವ ಲೇಖನ 'ವೈಶಾಖ'ದ ಜಾತಿ-ವರ್ಗಗಳ ಹಿನ್ನೆಲೆಯಲ್ಲಿ ಮಹಿಳೆಯರು, ತನ್ನ ಹಿತಾಸಕ್ತಿಗಾಗಿ ಮಹಿಳೆಯನ್ನು ತುಳಿಯುವ ಸಮಾಜದಲ್ಲಿ ಮಹಿಳೆಯ ಸಾಮಾಜೀಕರಣ ಆ ನೆಲೆಯಿಂದಲೇ ನಡೆಯುತ್ತದೆ. ಹಾಗಾಗಿ ತನ್ನನ್ನು ಸ್ವಸಮರ್ಥಿಸಿಕೊಳ್ಳಲು ತನ್ನ ಮೇಲೆ ನಡೆಯುವ ದೌರ್ಜನ್ಯವನ್ನು ಪ್ರತಿಭಟಿಸಲು ಮಹಿಳೆಗೆ ಸಾಧ್ಯವಾಗುವುದಿಲ್ಲ ಎನ್ನುವುದು ಕೃತಿಯಲ್ಲಿ ಸೂಚಿತವಾಗುತ್ತದೆ. ಬ್ರಾಹ್ಮಣ ಮತ್ತು ಶೂದ್ರ ವರ್ಗದ ಮಹಿಳೆಯರು ಎದುರಿಸುವ ಸಮಸ್ಯೆಗಳು ಮತ್ತು ಅದಕ್ಕೆ ಅವರ ಪ್ರತಿಕ್ರಿಯೆ ಇವುಗಳ ಹಿನ್ನೆಲೆಯಲ್ಲಿ ಲೇಖಕರ ಧೋರಣೆಯನ್ನು ಗ್ರಹಿಸಲಾಗಿದೆ. ನಿಯಮಗಳು ಹೆಚ್ಚಿದಂತೆ ರಹದಾರಿಗಳು ಹೆಚ್ಚುತ್ತವೆ, ಬೂಟಾಟಿಕೆ ಬೆಳೆಯುತ್ತದೆ ಎನ್ನುವ ಸತ್ಯ ಕೃತಿಯ ಒಳಗೆ ಅನುರಣನಗೊಳ್ಳುತ್ತದೆ. ಕೆಳ ವರ್ಗ-ಜಾತಿಗಳ ಹೆಂಗಸರು ಒಂದು ರೀತಿಯಿಂದ ಅತ್ಯಂತ ಶೋಷಿತರು, ಮತ್ತೊಂದು ರೀತಿಯಲ್ಲಿ ಮೇಲು ಜಾತಿ-ವರ್ಗಗಳ ಕೆಲವು ಮಿತ್‌ಗಳಿಂದ ಬಿಡುಗಡೆ ಪಡೆದವರು ಎನ್ನುವುದು ಅಲ್ಲಿನ ಸ್ತ್ರೀಪಾತ್ರಗಳಲ್ಲಿ ಬಿಂಬಿತವಾಗುತ್ತದೆ. ಜಾತಿಪದ್ಧತಿಯ ದೃಷ್ಟಿಯಿಂದ ಕಾದಂಬರಿಯ ವಿಮರ್ಶೆ ನಡೆದಿದೆಯೇ ವಿನಾ ಲಿಂಗಾಧರಿತ ವ್ಯವಸ್ಥೆಯಲ್ಲಿನ ದ್ವಿಸ್ತರ ನ್ಯಾಯವನ್ನು ಕೃತಿ ಪ್ರಶ್ನಿಸುವುದನ್ನು ಕುರಿತು ಬೇರೆ ಯಾರೂ ವಿಮರ್ಶಿಸಿದಂತಿಲ್ಲ. ಗಂಡು ಆಕ್ರಮಣಶೀಲ, ಹೆಣ್ಣು ಆಕ್ರಮಣವನ್ನು ಸಹಿಸುವಂಥವಳು ಎನ್ನುವ ಸಾಧಾರಣೀಕರಣವನ್ನು ರುಕ್ಮಿಣಿಯ ಬದುಕಿನ ಸಂದರ್ಭ ನಿರಾಕರಿಸುತ್ತದೆ ಎನ್ನುವುದಾಗಿ ವ್ಯಾಖ್ಯಾನಿಸುವ ವಿಜಯಾ ಇಂಥ ಸಾಧಾರಣೀಕರಣದ ಚೌಕಟ್ಟನ್ನು ಜೀವನಕೇಂದ್ರಿತ ಸಾಹಿತ್ಯ ಮೀರುತ್ತದೆ ಎಂದಿರುವ ಮಾತು ವೈಶಾಖದ ಹಿರಿಮೆಯನ್ನು ಎತ್ತಿಹಿಡಿಯುವಂಥದು. ಪ್ರಗತಿಶೀಲ ಪಂಥಕ್ಕೆ ಸೇರುವ ಚದುರಂಗರ ಕೃತಿಗಳಲ್ಲಿ ವೈಶಾಖ ವಿಶಿಷ್ಟವಾದುದು. "ವ್ಯವಸ್ಥೆಯೊಳಗಿರುವ ಅನ್ಯಾಯದ ವಿರುದ್ಧ ದನಿಯೆತ್ತುವ 'ವೈಶಾಖ' ಅನೇಕ ಜಾತಿ-ವರ್ಗ ವಲಯಗಳ ಮಹಿಳೆಯರ ಜೀವನವನ್ನು ಒಳಗಿನಿಂದ ಹಿಡಿದಿಟ್ಟಿದೆ. ವ್ಯಾಪಕವಾದ ಕಥಾವೇದಿಕೆಯಲ್ಲಿ ಹಿಡಿದಿಟ್ಟಿರುವ ಮಹಿಳೆಯರ ಬದುಕಿನ ವೈವಿಧ್ಯ ಮತ್ತು ಒಳನೋಟಗಳಿಂದ, ಮಹಿಳೆಯರ ಬಗೆಗಿನ ಕೆಲವು ಸ್ಥಾಪಿತ ಸತ್ಯಗಳನ್ನು ದಾಟಿ ಸತ್ಯವನ್ನು ಕಾಣಬಯಸುವ ಮುಕ್ತ ಮನಸ್ಸಿನಿಂದ 'ವೈಶಾಖ'ದ ಸಾಹಿತ್ಯಕ ಹಾಗೂ ಸಾಮಾಜಿಕ ಪ್ರಸ್ತುತತೆ ಮತ್ತು ಪ್ರಾಮುಖ್ಯ ಹೆಚ್ಚಿದೆ' ಎಂದು ತಮ್ಮ ಪ್ರಾಮಾಣಿಕ ಅನಿಸಿಕೆಯನ್ನು ದಾಖಲಿಸುತ್ತಾರೆ.

ಮಹಿಳೆಯನ್ನು ಸುತ್ತುವರಿದಿರುವ ಸಂಕೋಲೆಯಿಂದ ಬಿಡುಗಡೆ ಪಡೆಯಲು ಶಿಕ್ಷಣ ಎಷ್ಟು ಸಹಾಯಕ ಎನ್ನುವುದನ್ನು 'ಮಹಿಳಾ ವಿಮೋಚನೆ ಮತ್ತು ಶಿಕ್ಷಣ' ಲೇಖನ ವಿವಿಧ ಆಯಾಮಗಳಿಂದ ವಿಶ್ಲೇಷಿಸಲು ಪ್ರಯತ್ನಿಸಿದರೆ, 'ವರದಕ್ಷಿಣೆ ಸಮಸ್ಯೆ ಮತ್ತು ಗಾಂಧೀಜಿ' ಲೇಖನದಲ್ಲಿ ಗಾಂಧೀಜಿಯವರು ಸೂಚಿಸಿರುವ ವಲಯದಾಚೆಗಿನ ವಿವಾಹವನ್ನು ಸ್ವಾಗತಿಸುತ್ತಾರೆ. ಜಾತಿಯೊಳಗಿನ ಮದುವೆಗೂ ವರದಕ್ಷಿಣೆಗೂ ಸಂಬಂಧವಿದೆ ಎನ್ನುವ ಗಾಂಧೀಜಿಯವರ ಮಾತಿನ ಹಿನ್ನೆಲೆಯಲ್ಲಿ ಜಾತಿ ಅಂತಸ್ತು ಧರ್ಮಗಳಂಥ ಮನುಷ್ಯ ಮನುಷ್ಯನನ್ನು ಬೇರ್ಪಡಿಸುವ ಸಾಂಪ್ರದಾಯಿಕ ಕಟ್ಟಳೆಗಳಿಂದ ಈಚೆ ನಿಂತು ಪ್ರೀತಿಯ ನೆಲೆಯ ಮೇಲೆ ಮಾತ್ರ ವೈವಾಹಿಕ ಸಂಸ್ಥೆ ನಿಂತಾಗ ಈ ದಕ್ಷಿಣೆಯ ಸಂಸ್ಕೃತಿ ಹೇಳಹೆಸರಿಲ್ಲದಂತಾಗುತ್ತದೆ ಎಂದು ಅಭಿಪ್ರಾಯ ಪಡುವ ವಿಜಯಾ 'ಅದು ಚರಿತ್ರೆಯಲ್ಲಿ ಬಾರದ ದಿನವಲ್ಲ' ಎಂಬ ಆಶಾವಾದಿಯೂ ಹೌದು.

ಸಮಾಜದಲ್ಲಿ ಬದಲಾಗುತ್ತಿರುವ ಮಹಿಳೆಯ ಸ್ಥಾನಮಾನ ಕುರಿತ ಬರವಣಿಗೆ ಇರಲಿ, ಮಹಿಳಾ ಸಮ್ಮೇಳನದ ಅಗತ್ಯದ ಪ್ರತಿಪಾದನೆಯ ವಿಷಯವಿರಲಿ ಅಥವಾ ಜಾಹಿರಾತಿನಲ್ಲಿ ಹೆಣ್ಣು ಬಳಕೆಯಾಗುತ್ತಿರುವ ಸಂಗತಿಯಾಗಿರಲಿ ವಿಭಿನ್ನ ನೆಲೆಯಿಂದ ವಿಷಯವನ್ನು ವಿಮರ್ಶಿಸುವುದು ಅವರ ಬರವಣಿಗೆಯ ವಿಶಿಷ್ಟತೆ. ಅವರ ಅಭಿಪ್ರಾಯಗಳನ್ನು ನಾವು ಒಪ್ಪಬಹುದು ಬಿಡಬಹುದು ಆದರೆ ಅವರು ಪ್ರತಿಪಾದಿಸುವ ರೀತಿಯನ್ನು ಮೆಚ್ಚದಿರಲು ಸಾಧ್ಯವಿಲ್ಲ. ೧೯೯೮ರಲ್ಲಿ ಪ್ರಕಟವಾಗಿರುವ 'ನಾರಿ:ದಾರಿ-ದಿಗಂತ'ದಲ್ಲಿ ೨೦ ಲೇಖನಗಳಿದ್ದು ೧೫ ಲೇಖನಗಳು ಸಮಕಾಲೀನ ವಿಷಯಗಳನ್ನು ಚರ್ಚಿಸುವಂಥವು. 'ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ', 'ಕಪ್ಪು ಸ್ತ್ರೀವಾದಿ ವಿಮರ್ಶೆ', 'ಮಹಿಳಾ ಸಬಲೀಕರಣ ಮತ್ತು ನ್ಯಾಯಾಂಗ', 'ವೈಯಕ್ತಿಕ ಕಾನೂನಿನ ಸುಳಿಯಲ್ಲಿ ಮಹಿಳೆ' ಮೊದಲಾದ ಲೇಖನಗಳು ಮಹಿಳಾ ಅಧ್ಯಯನದ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿವೆ. ಈ ಲೇಖನಗಳಲ್ಲಿ ಮಂಡಿತವಾಗುವ ವಿಷಯ ಸೈದ್ಧಾಂತಿಕತೆಯನ್ನು ಆಧರಿಸಿ, ವಿಷಯದ ವಿವಿಧ ಮಗ್ಗುಲುಗಳನ್ನು ಉದಾಹರಣೆ ಸಹಿತ ವಿಶ್ಲೇಷಣೆಗೆ ಒಡ್ಡುವಂಥವು.

ಜನಪದ ಸಾಹಿತ್ಯವನ್ನು ಮಹಿಳಾ ದೃಷ್ಟಿಯಿಂದ ಅರ್ಥೈಸುವ ರೀತಿ, ಪತ್ರಿಕೋದ್ಯಮಕ್ಕೂ ಮಹಿಳಾ ಚಳವಳಿಗೂ ಇರುವ ಸಂಬಂಧದ ವ್ಯಾಖ್ಯೆ, ಮಹಿಳೆಯರಿಗೆ ರಾಜಕೀಯ ಮೀಸಲಾತಿ ಅಗತ್ಯ–ಹೀಗೆ ಯಾವುದೇ ವಿಷಯವಾಗಿರಲಿ ಎಳೆಎಳೆಯಾಗಿ ಬಿಡಿಸಿ ವಿವರಿಸುವ ರೀತಿಯಿಂದಾಗಿ ಓದುಗರಲ್ಲಿ ಯಾವುದೇ ಗೊಂದಲ ಸೃಷ್ಟಿಯಾಗುವುದಿಲ್ಲ. ವಿಶ್ವಸುಂದರಿ ಸ್ಪರ್ಧೆಯನ್ನು ಕೆಲವರು ಮಹಿಳೆಯರ ಒಂದು ಸಾಧನೆ ಎನ್ನುವಂತೆ ಭಾವಿಸುವುದರ ಹಿಂದಿನ ಅಪಾಯವನ್ನು ಅವರು ಬಿಚ್ಚಿಡುವ ರೀತಿ ವಿಶಿಷ್ಟವಾದುದು. ಮಹಿಳೆಯ ದೇಹ ಇಲ್ಲಿ ಹೇಗೆ ಒಂದು ಸರಕಾಗಿ ಬಳಕೆಯಾಗುತ್ತದೆ ಎನ್ನುವುದನ್ನು ಉದಾಹರಣೆ ಸಮೇತ ವಿವರಿಸುತ್ತಾರೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂದು ಕಾಣುವುದಕ್ಕೆ ಕಾರಣವಾದುದು ಕೌಟುಂಬಿಕ ಸಂರಚನೆ ಎನ್ನುವುದನ್ನು ಓದುಗರ ಗಮನಕ್ಕೆ ತರುತ್ತಾರೆ. ಮಹಿಳಾ ವಿಮೋಚನೆ ಕುರಿತಂತೆ ಇಲ್ಲಿ ಮೂರು ಲೇಖನಗಳಿವೆ. ಮಹಿಳೆಗಿರುವ ಅವಕಾಶ ಮತ್ತು ಆಕೆ ಎದುರಿಸುತ್ತಿರುವ ಸವಾಲುಗಳನ್ನು ಪ್ರಸ್ತಾಪಿಸಿ, ಹಲವು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿರುವ ಮಹಿಳೆಯ ವಿಮೋಚನೆಯ ಮಾರ್ಗ ಸುಲಭವಾದುದಲ್ಲ ಎನ್ನುವುದನ್ನು ಮನಗಾಣಿಸುತ್ತಾರೆ. "ಮಹಿಳಾ ವಿಮೋಚನೆಯೆಂಬುದು ಒಂದು ಪ್ರತ್ಯೇಕ, ಸಣ್ಣ ಸಂಗತಿಯಲ್ಲ. ಸ್ತ್ರೀ ಪುರುಷರೆಲ್ಲರೂ ಅಗಾಧ ಸಂಕಲ್ಪಬಲ, ಪ್ರಯತ್ನದಿಂದ ಈ ಕೆಲಸವನ್ನು ಮಾಡಬೇಕಾಗಿದೆ ಅಂಥ ಪ್ರಯತ್ನಗಳಿಂದ ಆಗುವ ಮಹಿಳಾ ವಿಮೋಚನೆಯಲ್ಲಿ ಸಮಾಜದ ವಿಮೋಚನೆಯಿದೆ, ನಾಳಿನ ಬೆಳಕಿದೆ.' ಎನ್ನುವ ಅವರ ದೃಷ್ಟಿಕೋನ ಗಮನಾರ್ಹವಾದುದು. ಪುರುಷ ಮತ್ತು ಸ್ತ್ರೀ ಪರಸ್ಪರ ವಿರುದ್ಧ ನೆಲೆಯವರಲ್ಲ, ಪೂರಕರು ಎನ್ನುವ ದೃಷ್ಟಿಕೋನ ವಿಜಯಾ ದಬ್ಬೆಯವರದು.

ಯಾವುದೇ ಬರವಣಿಗೆ ಇರಲಿ, ವಿಷಯವನ್ನು ತಲಸ್ಪರ್ಶಿಯಾಗಿ ನೋಡುವುದು ಮತ್ತು ಬಹುಮುಖೀ ದೃಷ್ಟಿಕೋನ ಅವರ ವಿಶಿಷ್ಟತೆ. ಪೂರ್ವಗ್ರಹೀತ ವಿಷಯ ಪ್ರತಿಪಾದನೆಗೆ ಅವರ ಒಲವಿದ್ದಂತೆ ಕಾಣುವುದಿಲ್ಲ. ಹಾಗಾಗಿ, ಅವರ ಬರವಣಿಗೆಗೆ ಒಂದು ಪ್ರಜಾಸತ್ತಾತ್ಮಕ ಧೋರಣೆ ಪ್ರಾಪ್ತವಾಗುತ್ತದೆ. ಜೊತೆಗೆ ಅವರು ಹೇಳಹೊರಟ ವಿಷಯ ಯಾವುದೇ ಸಂದಿಗ್ಧತೆಗೆ ಎಡೆಯಾಗದಂತೆ, ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾರೆ. ಅವರ ಬರವಣಿಗೆಯನ್ನು ಓದುಗ ಗೊಂದಲಕ್ಕೆ ಸಿಲುಕದೆ ಅರ್ಥಮಾಡಿಕೊಳ್ಳಲು ಇದರಿಂದ ಸಾಧ್ಯವಾಗುತ್ತದೆ.

ಚರಿತ್ರೆಯಿಂದ ಮರೆಯಾಗಿರುವ, ಅವಜ್ಞೆಗೆ ಒಳಗಾಗಿರುವ ಮಹಿಳಾ ಸಾಹಿತಿಗಳ ಬರವಣಿಗೆಯನ್ನು ದಾಖಲಿಸುವ ಅಗತ್ಯವನ್ನು ಮನಗಂಡು ಮೂರು ಮಹಿಳಾ ವಾಚಿಕೆಗಳನ್ನು ವಿಜಯಾ ಹೊರತಂದಿದ್ದಾರೆ. ನಂಜನಗೂಡು ತಿರುಮಲಾಂಬಾ ಅವರ ಸಾಹಿತ್ಯ ಮತ್ತು ಪತ್ರಿಕಾ ಚಟುವಟಿಕೆಗಳನ್ನು ಕುರಿತ ಸಂಕಲನ 'ಹಿತೈಷಿಣಿಯ ಹೆಜ್ಜೆ ಗುರುತು'. 'ಶ್ಯಾಮಲಾ ಸಂಚಯ' ಶ್ಯಾಮಲಾ ಬೆಳಗಾಂವಕರ್ ಅವರ ಕತೆಗಳ ಸಂಕಲನ, 'ಸಾರಸರಸ್ವತಿ' ಸರಸ್ವತಿ ಗೌಡರ್ ಅವರ ಬದುಕು ಬರವಣಿಗೆಯನ್ನು ಕುರಿತು. ಇತರರ ಬರವಣಿಗೆಗಳನ್ನು ಕುರಿತ ಸಂಪಾದನೆಯ ಕಾರ್ಯ ಎಷ್ಟು ಗುರುತರವಾದುದು ಎನ್ನುವುದನ್ನು ಅವರ ಇಲ್ಲಿನ ಮುನ್ನುಡಿಗಳು ತೆರೆದಿಡುತ್ತವೆ. ಆಯಾ ಲೇಖಕಿಯರ ಬದುಕಿನ ಸಂದರ್ಭದ ಹಿನ್ನೆಲೆಯಲ್ಲಿ ಅವರ ವಿಶಿಷ್ಟತೆಯನ್ನು ಗುರುತಿಸುವ ವಿಜಯಾ ಕನ್ನಡ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆಯ ಚಾರಿತ್ರಿಕ ಮಹತ್ವವನ್ನು ಎತ್ತಿಹಿಡಿಯುತ್ತಾರೆ.

ಸಾಹಿತ್ಯ ಅಕಾಡೆಮಿಯ ಯೋಜನೆಯಡಿ ಒರಿಸ್ಸಾ ಪ್ರವಾಸ ಕೈಗೊಂಡ ವಿಜಯಾ ದಬ್ಬೆಯವರು 'ಉರಿಯ ಚಿಗುರ ಉತ್ಕಲೆ'ಯಲ್ಲಿ ತಮ್ಮ ಪ್ರವಾಸಾನುಭವವನ್ನು ದಾಖಲಿಸುತ್ತಾರೆ. ಅವರು ಸಮಾಜ ಮತ್ತು ಸಂಸ್ಕೃತಿಯನ್ನು ಹೇಗೆ ಗ್ರಹಿಸುತ್ತಾರೆ ಎನ್ನುವುದಕ್ಕೆ ಈ ಕೃತಿ ಉದಾಹರಣೆಯಾಗುತ್ತದೆ. ಒರಿಸ್ಸಾ ಪ್ರವಾಸದಲ್ಲಿ ತಮಗೆ ದಕ್ಕಿದ ಅನುಭವಗಳನ್ನು ಆಧರಿಸಿ ಅಲ್ಲಿನ ರಾಜಕೀಯ ಸ್ಥಿತಿ, ಸಾಮಾಜಿಕ ನಂಬಿಕೆ, ಜನಸಾಮಾನ್ಯರ ಬವಣೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಸಂಸ್ಕೃತಿಯ ಪದರದಲ್ಲಿ ಸೇರಿರುವ ಮಹಿಳಾ ನೆಲೆಯನ್ನು ಗ್ರಹಿಸುವ ಯತ್ನ ಅವರ ಈ ಬರವಣಿಗೆಯಲ್ಲಿ ಕಂಡುಬರುತ್ತದೆ.

ಸುಮಾರು ಮೂವತ್ತಾರು ವಾರಗಳು 'ಆಂದೋಲನ' ಪತ್ರಿಕೆಯಲ್ಲಿ ಬಂದ ಅವರ ಅಂಕಣ ಬರಹ 'ನಿಲ್ಲು ನಿಲ್ಲೆಲೆ ನೋಟ'. ದಿನನಿತ್ಯದ ಬದುಕಿನಲ್ಲಿ ಕಾಣುವ ಸಂಗತಿಗಳನ್ನು ಸಾಮಾಜಿಕ ಧೋರಣೆಯಿಂದ ವಿಶ್ಲೇಷಿಸಿರುವುದು ಈ ಅಂಕಣದ ವೈಶಿಷ್ಟ್ಯ. ಇಲ್ಲಿಯೂ ಅವರ ದೃಷ್ಟಿ ಸ್ತ್ರೀಯರ ಬದುಕಿನ ಕಡೆಗೇ ಹೊರಳಿದೆ. 'ಪುಟ್ಟ ಗಂಡ ಪಟ್ಟೆಸೀರೆ'ಯಂತಹ ಬರವಣಿಗೆ ಲವಲವಿಕೆಯಿಂದ ಕೂಡಿದ್ದು ಹೀಗೆ ಹಾರೈಸುವುದರ ಹಿಂದಿನ ಸಾಮಾಜಿಕ ಸಂದರ್ಭವನ್ನು ಅನಾವರಣಗೊಳಿಸುತ್ತದೆ. ಬಾಲ್ಯವಿವಾಹ, ವರದಕ್ಷಿಣೆ, ಅತ್ಯಾಚಾರ, ಜೈಲಿನಲ್ಲಿರುವ ಮಹಿಳಾ ಕೈದಿಗಳ ಸ್ಥಿತಿ, ಬಾಲ್ಯವೇಶ್ಯಾ ಸಮಸ್ಯೆ ಹೀಗೆ ಅವರ ಲೇಖನಿ ಮಹಿಳೆಯರ ಸಮಸ್ಯೆಯ ಕಡೆ ಹರಿದಿದೆ.

ವಿಜಯಾ ದಬ್ಬೆಯವರು ಆಧುನಿಕ ಸಾಹಿತ್ಯ ಮತ್ತು ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿದ್ದರೂ ಪ್ರಾಚೀನ ಸಾಹಿತ್ಯವನ್ನು ಕಡೆಗಣಿಸಿಲ್ಲ. ನಾಗಚಂದ್ರನನ್ನು ಕುರಿತ ಅವರ ಪಿಎಚ್.ಡಿ. ನಿಬಂಧ ಸಂಶೋಧನೆಯ ಶಿಸ್ತನ್ನು ಅಚ್ಚುಕಟ್ಟಾಗಿ ನಿರ್ವಹಿಸಿದುದನ್ನು ಕಾಣಿಸುತ್ತದೆ. ಅವರ 'ನಯಸೇನ' ಕೃತಿ ಕವಿಯನ್ನು ಜನಸಾಮಾನ್ಯರಿಗೆ ಪರಿಚಯಿಸುವಲ್ಲಿ ಸಹಾಯಕ. ಸಾನಂದ ಗಣೇಶ ಸಾಂಗತ್ಯ ಮತ್ತು ನಾಗಚಂದ್ರ ಎರಡೂ ಸಂಪಾದಿತ ಕೃತಿಗಳಾಗಿದ್ದು ಅವರ ಹಳಗನ್ನಡದ ಮೇಲಿನ ಅಭಿಮಾನಕ್ಕೆ ಉದಾಹರಣೆ.

೧೯೭೦ರಲ್ಲಿ ತಮ್ಮ ವೃತ್ತಿಜೀವನವನ್ನು ಪ್ರಾರಂಭಿಸಿದ ವಿಜಯಾ ದಬ್ಬೆ ೧೯೯೮ರವರೆಗೆ ತಮ್ಮ ವಿಶಿಷ್ಟ ಆಲೋಚನಾ ಕ್ರಮದಿಂದ ಕನ್ನಡ ಸಾಹಿತ್ಯ, ಸಂಸ್ಕೃತಿಗಳನ್ನು ಭಿನ್ನ ನೆಲೆಯಿಂದ ನೋಡುವ ಅಗತ್ಯವಿದೆ ಎನ್ನುವ ಹೊಸ ದೃಷ್ಟಿಯನ್ನು ಬೆಳೆಸಲು ಪ್ರಯತ್ನಿಸಿದ ಅಪರೂಪದ ಸಾಹಿತಿ. ❑

---

*ಪ್ರಿಯ ಶ್ರೀಮತಿ ರಾಜೇಶ್ವರಿಯವರಿಗೆ,*
*ವಂದನೆಗಳು*

*ಕುಪ್ಪಳಿಯಲ್ಲಿ ನಡೆಸಿದ ಕಾರ್ಯಕ್ರಮದ ಬಗ್ಗೆ ಒಂದೇ ಮಾತಿನಲ್ಲಿ ಹೇಳುವುದಾದರೆ ನಿಮ್ಮ ಕಾರ್ಯಕ್ರಮ ವಿಶಿಷ್ಟವಾದುದೂ, ಪ್ರಸಕ್ತ ಸಂದರ್ಭದಲ್ಲಿ ಅತ್ಯಂತ ಜರೂರಿನದಾಗಿಯೂ, ಸ್ತ್ರೀಯರಿಗೆ ಘನತೆ ತಂದುಕೊಡುವಂತಹದೂ ಆಗಿತ್ತು. ಮೌನವನ್ನೇ ಅಪ್ಪಿಕೊಂಡಿರುವ ಕೋಟ್ಯಂತರ ಮಹಿಳೆಯರಿದ್ದಾರೆ. ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದರೂ, ತಮ್ಮ ಒಳಗನ್ನು ಅಡುಗೆಮನೆಯಲ್ಲಿಟ್ಟು, ಶಯನಗೃಹದಲ್ಲಿ ಸೇವೆ ಮಾಡುತ್ತ, ತಾಯ್ತನದ ತ್ಯಾಗ ಮಾಡುತ್ತ ಅಭಿವ್ಯಕ್ತಿ ಸಾಧ್ಯವೇ ಎಂದು ಹಪಹಪಿಸುವ ಮಹಿಳೆಯರಿಗೆ 'ನಮ್ಮ ಮಾನಸ' ಒಂದು ದನಿಯಾಗುವ ಸಾಧ್ಯತೆ, ನಿಮ್ಮ ಕಾರ್ಯಕ್ರಮದಲ್ಲಿ ಸ್ಪಷ್ಟವಾಗಿ ಗೋಚರಿಸಿತು. ಅದಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತೇನೆ.*

**–ಎಸ್. ಮಾಲತಿ, ಸಾಗರ**

## ಕಣ್ಣುಗಳಿಗೆ ಹಬ್ಬ! ಮೈಮನಗಳಿಗೆ ಪುಳಕ!
## ರೋಮಾಂಚಕ ಅನುಭವ!
## ಏಕ ಕಾಲದಲ್ಲಿ ಈ ಎಲ್ಲಾ ಅನುಭವವನ್ನು ನಿಮ್ಮದಾಗಿಸುವ

# ಹಂಪಿ

ಹಂಪಿ ಎಂದಾಕ್ಷಣ ಪ್ರತಿಯೊಬ್ಬರ ಮನಸ್ಸಿನಲ್ಲಿ ಮೂಡಿಬರುವ ಚಿತ್ರ ಮುತ್ತುರತ್ನಗಳನ್ನು ರಸ್ತೆಬದಿಯಲ್ಲಿ ರಾಶಿ ಹಾಕಿ ಮಾರಾಟ ಮಾಡುತ್ತಿದ್ದ ದೃಶ್ಯ. ದೇಶ ವಿದೇಶೀಯರು ಬೆಕ್ಕಸ ಬೆರಗಾಗಿ ವಿಜಯನಗರ ಸಾಮ್ರಾಜ್ಯದ ವೈಭವವನ್ನು ಆನಂದಿಸುತ್ತಿರುವ ಕ್ಷಣಗಳು. ಸುಖ ಸಂತಸದ ಬದುಕು ನಡೆಸುತ್ತಿದ್ದ ಹಸನ್ಮುಖಿ ಪ್ರಜಾ ಸಮುದಾಯ.

### ಏನುಂಟು! ಏನಿಲ್ಲ!

ಇಂತಹ ವೈಭವೋಪೇತ ಸಾಮ್ರಾಜ್ಯದ ಅವಶೇಷಗಳೊಂದಿಗೆ ವಿಶಾಲ ಕ್ಷೇತ್ರದಲ್ಲಿ ಸಾಕ್ಷಿಯಾಗಿ, ಸದಾ ಕುತೂಹಲದ ತಾಣವಾಗಿರುವ ಹಂಪಿ ಇಂದು ಜಗತ್ತಿನ ಬೃಹತ್ ತೆರೆದ ವಸ್ತು ಸಂಗ್ರಹಾಲಯ; ವಿಶ್ವ ಪರಂಪರೆಯ ತಾಣ.


ಕರ್ನಾಟಕ ವಾರ್ತೆ



# ಮಹಿಳೆಯರ ವಿರುದ್ಧ "ಯುದ್ಧಗಳು"

● *ಬಿ.ಎನ್. ಸುಮಿತ್ರಾಬಾಯಿ*

**ಯು**ದ್ಧಕಾಲದಲ್ಲಿ ಸತ್ಯವೇ ಮೊಟ್ಟಮೊದಲ ದೌರ್ಜನ್ಯಕ್ಕೊಳಗಾಗುವುದು ಎಂದುಹೇಳಲಾಗುತ್ತದೆ. ಆದರೆ ನಿಜವಾದ ಸತ್ಯವೆಂದರೆ ಮೊದಲು ದೌರ್ಜನ್ಯಕ್ಕೆ ಒಳಗಾಗುವವರು ಮಹಿಳೆಯರು. ವಿಶ್ವಸಂಸ್ಥೆಯ ಮಕ್ಕಳ ಸಂಸ್ಥೆಯಾದ UNICEF ಇತ್ತೀಚೆಗೆ ಯುದ್ಧಪೀಡಿತ ವಲಯಗಳ ಅಧ್ಯಯನದಿಂದ ಕಂಡುಕೊಂಡಿರುವ ಅಂಶವೆಂದರೆ ಸಾಮಾನ್ಯವಾಗಿ ಅಂತಹ ಸಂಘರ್ಷ ವಲಯಗಳಲ್ಲಿ ಲೈಂಗಿಕ ಹಿಂಸಾಚಾರಗಳು ತೀವ್ರ ಸಾಂಕ್ರಾಮಿಕರೋಗದ ಹಾಗೆ ಹರಡುತ್ತವೆ. ದೇಶಗಳ ಆಂತರಿಕ ಯುದ್ಧವಿರಲಿ, ಅಸಹಾಯಕರ ಹತ್ಯಾಕಾಂಡ ವಿರಲಿ (pogram) ಅಥವಾ ಬೇರೆ ರೀತಿಯ ಸಶಸ್ತ್ರ ಯುದ್ಧಗಳೇ ಇರಲಿ, ಯಾವಾಗಲೂ ಮಹಿಳೆಯರ ದೇಹಗಳೇ ರಣರಂಗವಾಗಿ ಬಿಡುವುದು ತೀರಾಸಾಮಾನ್ಯ. ದೊಡ್ಡ ಪ್ರಮಾಣದ ಲೈಂಗಿಕ ದೌರ್ಜನ್ಯಗಳಿಗೆ ಬಲಿಪಶುಗಳಾಗುವವರಲ್ಲಿ ಎಳೆಕೂಸುಗಳಿಂದ ಹಿಡಿದು ವೃದ್ಧೆಯರವರೆಗಿನ ಎಲ್ಲ ವಯೋಮಾನದ ಮಹಿಳೆಯರಿರುತ್ತಾರೆ,

ದರ್‌ಫರ್ (Darfur)ನಲ್ಲಿ ಜಾನ್‌ಜವೀನ್ ಮಿಲಿಟರಿ ಸೈನಿಕರು ಹನ್ನೆರಡು ವರ್ಷದ ಹುಡುಗಿಯೊಬ್ಬಳನ್ನು ಅಪಹರಿಸಿಕೊಂಡು ಹೋಗಿ ಒಂದು ವಾರಕಾಲ ಅವಳ ಮೇಲೆ ಸಾಮೂಹಿಕವಾಗಿ ಅತ್ಯಾಚಾರ ನಡೆಸಿದರು. ಅವಳ ಕಾಲುಗಳನ್ನು ಎಷ್ಟು ಅಗಲಮಾಡಿ ಎಳೆದಾಡಿದ್ದರೆಂದರೆ ಈಗ ಬದುಕಿನುದ್ದಕ್ಕೂ ಅವಳು ಕುಂಟಿಯಾಗಿರಬೇಕಾಗಿದೆ. ದರ್‌ಫರ್‌ನಲ್ಲಿ ಈ ರೀತಿಯಲ್ಲಿ ಅತ್ಯಾಚಾರಕ್ಕೆ ಬಲಿಯಾದ ಹೆಣ್ಣುಗಳಿಗೆ ಬಲುದೊಡ್ಡ ಭಯ ಎಂದರೆ ಮುಂದೆ ಅಂಥವರಿಗೆ ಯಾರೂ ಗಂಡ ದೊರೆಯುವುದಿಲ್ಲ ಎಂಬುದೇ

## ಅತ್ಯಾಚಾರ : ಒಂದು ಯುದ್ಧತಂತ್ರ !

**ಜ**ಗತ್ತಿನ ನಾಯಕರು ಶೃಂಗಸಭೆಗಳ ಮೂಲಕ, ತೀಕ್ಷ್ಣವಾದ ಮಾತುಗಳಿಂದ ಖಂಡಿಸುವ ಮೂಲಕ ಮತ್ತು ಭದ್ರತಾಕ್ರಿಯೆಗಳನ್ನು ಕೈಗೊಳ್ಳುವ ಮೂಲಕ ಭಯೋತ್ಪಾದನಾವಾದದ ವಿರುದ್ಧ ಹೋರಾಟ ಮಾಡುತ್ತಲೇ ಬಂದಿದ್ದಾರೆ. ಆದರೆ ಅವರು ಅತಿ ನಿಷ್ಠೆಯಿಂದ ಯತ್ನಿಸಿಯೂ ಪ್ರಪಂಚದಲ್ಲಿ ಇಂದು ತೀರಾ ಸಾಮಾನ್ಯವಾಗಿರುವ ಅಷ್ಟೇ ಕ್ರೂರವಾದ ಮತ್ತೊಂದು ರೀತಿಯ ಭಯೋತ್ಪಾದನೆಯನ್ನು ಲೆಕ್ಕಕ್ಕೆ ತೆಗೆದುಕೊಂಡೇ ಇಲ್ಲ.

ಈ ಭಯೋತ್ಪಾದನೆಯು ತೀರಾ ಅಳತೆ ತಪ್ಪಿದ ಪ್ರಮಾಣದಲ್ಲಿ ಮಕ್ಕಳನ್ನು ತನ್ನ ಗುರಿಯಾಗಿಟ್ಟುಕೊಂಡಿದೆ. ಅದು WMDಯನ್ನು ಬಳಸುವುದಿಲ್ಲ. ಕೇವಲ AK-47ಗಳನ್ನು, ಮಚ್ಚುಗತ್ತಿಗಳನ್ನು ಮೊನಚಾದ ಕಡ್ಡಿಗಳನ್ನಷ್ಟೇ ಬಳಸಿಕೊಳ್ಳುತ್ತದೆ. ಆ ಭಯೋತ್ಪಾದನೆಯೇ ಮಹಿಳೆಯರ ಮೇಲಿನ–ಸಾಮೂಹಿಕ ಅತ್ಯಾಚಾರ. ತುಂಬ ತಡವಾಗಿಯಾದರೂ ಈ ವಾರ ಈ ಭಯೋತ್ಪಾದನೆಯನ್ನು ಅಂತರರಾಷ್ಟ್ರೀಯ ಪರಿಹಾರ ಕಾರ್ಯದ ಜಾಗಕ್ಕೆ ಏರಿಸಲಾಗುತ್ತಿದೆ.

ಸಂಯುಕ್ತ ರಾಷ್ಟ್ರಗಳ ಭದ್ರತಾ ಕೌನ್ಸಿಲ್ ಲೈಂಗಿಕ ಹಿಂಸಾಚಾರದ ಬಗ್ಗೆ ಇದೇ ಗುರುವಾರದಂದು ಒಂದು ವಿಶೇಷ ಅಧಿವೇಶನವನ್ನು ನಡೆಸಲಿದೆ. ಅಲ್ಲಿ ಈ ಕುರಿತ ಚರ್ಚೆಯನ್ನು ಕೈಗೊಳ್ಳಲು ಕಾಂಡಲೀಸಾ ರೈಸ್ ಅವರು ನ್ಯೂಯಾರ್ಕ್‌ಗೆ ಬರಲಿದ್ದಾರೆ. ಈ ವಿಶೇಷ ಅಧಿವೇಶನವನ್ನು ವಿಶ್ವಸಂಸ್ಥೆಯೇ ಪ್ರಾಯೋಜಿಸುತ್ತಿದೆ. ಸಾಮೂಹಿಕ ಅತ್ಯಾಚಾರದ ವರದಿಗಳ ಕ್ರಮಬದ್ಧ ತನಿಖೆ ನಡೆಸುವ ಬಗ್ಗೆ ಭದ್ರತಾ ಸಲಹಾಸಮಿತಿ ಕೈಗೊಂಡಿರುವ ಒಂದು ನಿರ್ಣಯವು ಇದಕ್ಕೆ ಬೆಂಬಲವಾಗಿದೆ. ಇದರಿಂದ ಸಾಮೂಹಿಕ ಅತ್ಯಾಚಾರದ ಅಳತೆಪಾತ್ರೆಯು ಹೆಸರು ಹೇಳಲಾಗದ ಸ್ಥಿತಿಯಿಂದ ತುಂಬ ಗಂಭೀರವಾದ ವಿದೇಶಾಂಗ ನೀತಿಯ ಪ್ರಶ್ನೆಯಾಗಲು ಸಾಧ್ಯವಾಗಬಹುದು.

**ಸೆರ್ಬಿಯಾದ ಅತ್ಯಾಚಾರ–ಕ್ಯಾಂಪ್‌ಗಳು**

ಸೆರ್ಬಿಯಾದ ಸೈನ್ಯಗಳು "ರೇಪ್ ಕ್ಯಾಂಪ್"ಗಳದೇ ಜಾಲವೊಂದನ್ನು ಕಟ್ಟಿಕೊಂಡಿದ್ದು, ಈ ವಿದ್ಯಮಾನಕ್ಕೆ ಜಗತ್ತು ಎಚ್ಚರಗೊಂಡಿದ್ದು ೧೯೯೩ರಲ್ಲಿ. ಅಂಥ ಕ್ಯಾಂಪ್‌ಗಳಲ್ಲಿ ಮಹಿಳೆಯರು, ಹುಡುಗಿಯರು, ೧೨ ವರ್ಷದಷ್ಟು ಎಳೆಯರೂ ಗುಲಾಮರಾಗಿರುವ ಸತ್ಯಸಂಗತಿ ಬೆಳಕಿಗೆ ಬಂದಾಗಿನಿಂದ ಬೇರೆ ಅನೇಕ ದೇಶಗಳಲ್ಲೂ ವ್ಯವಸ್ಥಿತವಾಗಿ ಸಾಮೂಹಿಕ ಅತ್ಯಾಚಾರ ನಡೆಸುವ ಅಂಥದೇ ರಚನಾ ವಿನ್ಯಾಸಗಳು ಕಾಣತೊಡಗಿದವು. ಈ ಸಾಮೂಹಿಕ ಅತ್ಯಾಚಾರಗಳು ಕೇವಲ ಯುದ್ಧದ ಉಪ ಪರಿಣಾಮಗಳಷ್ಟೇ ಆಗಿಲ್ಲ. ಅನೇಕ ಸಲ ಅವು ಉದ್ದೇಶಪೂರ್ವಕವಾದ ಅಸ್ತ್ರಗಳಾಗಿಯೂ ಬಳಕೆಯಾಗುತ್ತವೆ ಎಂಬುದು ಈಗ ತುಂಬ ಸ್ಪಷ್ಟವಾಗಿದೆ.

ಆಫ್ರಿಕಾದಲ್ಲಿ ವಿಶ್ವಸಂಸ್ಥೆಯ AIDS ರಾಯಭಾರಿಯಾಗಿರುವ, ಮೂಲತಃ ಕೆನಡಾದವರಾದ ಸ್ಟೀಫನ್ ಲೆವಿಸ್ ಹೇಳುವ ಪ್ರಕಾರ



ಆಗಿದೆ. ಷರಿಯತ್ ಕಾನೂನಿನ ಪ್ರಕಾರ ಅತ್ಯಾಚಾರಕ್ಕೆ ಒಳಗಾದ ಮಹಿಳೆಯರನ್ನು ವ್ಯಭಿಚಾರಕ್ಕಾಗಿ ಅಥವಾ ಕನ್ಯಾಸಂಭೋಗದ ಅಪರಾಧಕ್ಕಾಗಿ ದಂಡಿಸಲಾಗುತ್ತದೆ. ಕಳೆದವರ್ಷ ಸೂಡಾನ್‌ನಲ್ಲಿ ಕೊನೆಯಪಕ್ಷ ಇಬ್ಬರು ಮಹಿಳೆಯರನ್ನು ಹೀಗೆ ಕಲ್ಲೇಟಿನಿಂದ ಕೊಲ್ಲಲಾಯಿತು. ಅಂತಾರಾಷ್ಟ್ರೀಯ ನಿರಾಶ್ರಿತರು ಹೇಳುವ ಪ್ರಕಾರ "ಸರ್ಕಾರವು ವ್ಯಭಿಚಾರ ಮಾಡಿದವರನ್ನು ಹಿಡಿದು ದಂಡಿಸುವ ಬದಲಾಗಿ ಹೇಗೆ ವ್ಯಭಿಚಾರ ವಾಯಿತೆಂದು ವರದಿ ಮಾಡಿದವರನ್ನೇ ಶಿಕ್ಷಿಸುತ್ತದೆ."

**ಹೊರಲಾರದ ಹೊರೆ**

ಈಗ ಕಾಂಗೋನ ಜನತಾಂತ್ರಿಕ ಗಣರಾಜ್ಯದಲ್ಲಿ ದೌರ್ಜನ್ಯ ಮೆರೆಸುತ್ತಿರುವ ಯುದ್ಧಗಳಲ್ಲಿ ಅತ್ಯಾಚಾರಕ್ಕೆ ಬಲಿಪಶುಗಳಾದ ಮಹಿಳೆಯರೇ ಆ ಅಪರಾಧದ ಎಲ್ಲಾ ಆರೋಪವನ್ನು ಹೊತ್ತುಕೊಳ್ಳಬೇಕಾಗಿದೆ. ಅತ್ಯಾಚಾರಕ್ಕೆ ಬಲಿಯಾದವರನ್ನು ಗಂಡಂದಿರು ಮನೆಯಿಂದ ಹೊರದೂಡುತ್ತಾರೆ. ಅವರ ಸಮಾಜಗಳು ಅವರನ್ನು ಬಹಿಷ್ಕರಿಸುತ್ತವೆ. ಅನೇಕ ಸಲ ಅಂಗಚ್ಛೇದ ಮಾಡಿ, ಗುಂಡುಹೊಡೆದು ಇಲ್ಲವೆ ಬೆತ್ತಲಾಗಿ ಬೆಂಕಿಗೆಸೆದು ಸಾಯಿಸಲಾಗುತ್ತದೆ.

ಹುಡುಗಿಯರನ್ನು, ಹೆಂಗಸರನ್ನು "ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುವ" ಪದ್ಧತಿಯಿರುವಂಥ ಸಮಾಜಗಳಲ್ಲಿ ಹೆಣ್ಣಿನ ಲೈಂಗಿಕ ಪಾವಿತ್ರ್ಯ (ಶೀಲ ರಕ್ಷಣೆ) ಹೆಣ್ತನದ ಅತಿಮುಖ್ಯ ಲಕ್ಷಣ ಎಂದು ಭಾವಿಸಲಾಗುತ್ತದೆ. ಮಾನಭಂಗಗೊಂಡ ಹೆಂಗಸಿನ ಸರ್ವಸ್ವವೂ ನಾಶವಾದಂತೆಯೇ ಎಂದು ನಂಬಲಾಗುತ್ತದೆ. ಹೀಗಾಗಿ ಅತ್ಯಾಚಾರದ ನಂತರ ಎದುರಾಗುವ ಕಳಂಕವು ನೇರ ಆಕ್ರಮಣದ ಆ ಕ್ರಿಯೆಗಿಂತಲೂ ದೊಡ್ಡ ಹೊರೆಯಾಗಿ ಪರಿಣಮಿಸಿಬಿಡುತ್ತದೆ. ಆದ್ದರಿಂದಲೇ ಬಹುಪಾಲು ಹೆಣ್ಣುಮಕ್ಕಳು ಈ ರೀತಿ ಬಲಾತ್ಕಾರಕ್ಕೆ ಒಳಗಾದರೂ ಅದರ ಬಗ್ಗೆ ಬಾಯಿಬಿಡುವುದೇ ಇಲ್ಲ.

೧೯೯೦ರ ದಶಕದಲ್ಲಿ ಬಾಲ್ಕನ್‌ನಲ್ಲಿ ನಡೆದ ಯುದ್ಧಗಳಲ್ಲಿ ಹೆಂಗಸರನ್ನು ಅವರ ಶತ್ರುಸಂತಾನವನ್ನು ಹೊರುವಂತೆ ಮಾಡುವ ಉದ್ದೇಶದಿಂದಲೇ ಅತ್ಯಾಚಾರ ನಡೆಸಲಾಗುತ್ತಿತ್ತು. ಯುರೋಪಿಯನ್ ಯೂನಿಯನ್ ಅಂದಾಜು ಮಾಡಿರುವ ಪ್ರಕಾರ ಬೋಸ್ನಿಯಾ ಒಂದರಲ್ಲೇ ೨೦,೦೦೦ ಮಹಿಳೆಯರು ಆಗ ಅತ್ಯಾಚಾರಕ್ಕೆ ಬಲಿಯಾದರು. ಬಹಳಷ್ಟು ಸಲ ಆ ಭಯಂಕರ ದೌರ್ಜನ್ಯಕ್ಕೆ ಬಲಿಯಾದವರನ್ನು ಆ ಸ್ಥಿತಿಯಲ್ಲೇ ತೊರೆದುಬಿಡಲಾಗಿದ್ದು ಅವರು ಅತ್ಯಂತ ನಿರ್ಗತಿಕ ಬಡಜೀವನ ನಡೆಸುವ ಶಿಕ್ಷೆಗೆ ಬಲಿ ಯಾಗಿದ್ದಾರೆ.

೧೯೪೫ರಲ್ಲಿ (ಎರಡನೇ ಮಹಾಯುದ್ಧದ ಅವಧಿ ಯಲ್ಲಿ) ರಷ್ಯದ ಕೆಂಪು ಸೈನ್ಯದವರ ಲೈಂಗಿಕ ಹಿಂಸಾಚಾರಕ್ಕೆ ಎರಡು ಮಿಲಿಯನ್ ಮಹಿಳೆಯರು ಬಲಿಯಾದರೆಂದು ಅಂದಾಜು ಮಾಡಲಾಗಿದೆ. ಅವರಲ್ಲಿ ಜರ್ಮನ್ ಮಹಿಳೆಯರಷ್ಟೇ ಅಲ್ಲ, ಗುಟ್ಟಾಗಿ ಯಹೂದಿ ಮಹಿಳೆಯರೂ ಬಲಿಯಾಗಿದ್ದಾರೆ. ಕಾನ್ಸಂಟ್ರೇಷನ್ ಕ್ಯಾಂಪ್‌ಗಳಲ್ಲಿ ಬದುಕುಳಿದವರು, ಪ್ರತಿಭಟನಾನಿರತ ಹೋರಾಟಗಾರ್ತಿಯರೂ ಸೇರಿದ್ದಾರೆ. ಜರ್ಮನ್ ಪತ್ರಕರ್ತೆ ರೂತ್ ಆಂಡ್ರೀಸ್ ಫ್ರೆಡ್‌ರಿಕ್ ಹೇಳುವ ಹಾಗೆ "'ಶೀಲನಷ್ಟವಾದ' ಸ್ತ್ರೀಯರು ಅನುಭವಿಸಿದ ಅವಮಾನ ನಾಚಿಕೆಗಳು ಆತ್ಮಹತ್ಯೆಯ ವಾತಾವರಣವನ್ನೇ ಸೃಷ್ಟಿಮಾಡಿತ್ತು."

೧೯೪೫ರ ಏಪ್ರಿಲ್‌ನಲ್ಲಿ ಬರ್ಲಿನ್‌ನಲ್ಲಿ ೫೦೦೦ಕ್ಕೂ ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಆತ್ಮಹತ್ಯೆ



"ಯುದ್ಧಗಳಲ್ಲಿ ಅತ್ಯಾಚಾರ ಎನ್ನುವುದು ಲೆಕ್ಕಕ್ಕೆ ಸಿಗದಷ್ಟು ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿದೆ. ಆದರೆ ಕಮಾಂಡರುಗಳು ಅದನ್ನು ಒಂದು ಯುದ್ಧತಂತ್ರವನ್ನಾಗಿ ಬಳಸುತ್ತಿರುವುದು ಆ ವಿದ್ಯಮಾನಕ್ಕೆ ಹೊಸ ತಿರುವೊಂದನ್ನು ಉಂಟುಮಾಡಿದೆ."

ಈ ರೀತಿಯಾಗಿರುವುದಕ್ಕೆ ಎರಡು ಕಾರಣಗಳಿವೆ. ಮೊದಲನೆಯದು ಮಿಲಿಟರಿ ದೃಷ್ಟಿಯಿಂದ ಸಾಮೂಹಿಕ ಅತ್ಯಾಚಾರ ಬಹಳ ತೀವ್ರ ಪರಿಣಾಮ ಹುಟ್ಟಿಸುವಂಥದು. ಸೈನಿಕರಿಗೆ ಗುಂಡಿನ ಕಾಳಗದಲ್ಲಿ ತುಂಬ ಅಪಾಯಗಳಿರುತ್ತವೆ. ಆದ್ದರಿಂದ ಪ್ರಜೆಗಳಲ್ಲಿ ಭಯಹುಟ್ಟಿಸಿ, ಅವರನ್ನು ದೂರ ಓಡಿಸಿದಲ್ಲಿ ತಮ್ಮ ವಿರೋಧಿ ಬಣಕ್ಕೆ ಬೆಂಬಲವಿಲ್ಲದಂತೆ ಮಾಡುವುದು ಸುಲಭ.

ಎರಡನೆಯದು: ಸಾಮೂಹಿಕ ಅತ್ಯಾಚಾರದ ಬಗ್ಗೆ ಅಂತರರಾಷ್ಟ್ರೀಯ ಭದ್ರತಾದಳ ತನಿಖೆ ಕೈಗೊಂಡರೂ ಯುದ್ಧದಲ್ಲಿ ಮೃತರಾದವರ ಶರೀರಗಳ ರಾಶಿಗಿಂತ ಕಡಿಮೆ ಅಪಾಯವಿರುತ್ತದೆ. ಏಕೆಂದರೆ ಅತ್ಯಾಚಾರದ ಪ್ರಶ್ನೆ ತುಂಬ ನಾಜೂಕಾದದ್ದು, ಅದಕ್ಕೆ ಬಲಿಯಾದವರು ಬಾಯಿಬಿಡಲು ನಾಚುತ್ತಾರೆ.

ಸೂಡಾನ್ ಸರ್ಕಾರವು ದರ್‌ಫರ್ ನಗರವನ್ನೇ ಒಂದು ಅತ್ಯಾಚಾರದ ಕ್ಯಾಂಪ್ ಆಗಿ ಪರಿವರ್ತಿಸಿದೆ. ಈ ಬಗ್ಗೆ ಸುಳಿವು ನೀಡಿದ ಮೊದಲ ಮಹಿಳೆ ಜ಼ಹ್ರಾ ಅಬ್‌ಡೆಲ್ಕಾರಿಮ್ ಎಂಬಾಕೆ. ಅವಳನ್ನು ಅಪಹರಿಸಿ, ಸಾಮೂಹಿಕ ಅತ್ಯಾಚಾರ ನಡೆಸಿ, ಕತ್ತಿಯಿಂದ ಅವಳ ಕಾಲಿನ ಮೇಲೆ ಬಲವಾಗಿ ಹೊಡೆದು ಅಂಗವಿಕಲಗೊಳಿಸಲಾಗಿತ್ತು. ನಗ್ನಳಾಗಿ, ರಕ್ತಸುರಿಸುತ್ತ ಅಲೆದಾಡುತ್ತಲೇ ಅವಳು ತನ್ನ ಜಘವಾ ಬುಡಕಟ್ಟಿನವರನ್ನು ತಲುಪಲು ಬಿಡಲಾಯಿತು. ಹೀಗೆ ಅವಳು ಆ ಜನರಿಗೆ (ಅತ್ಯಾಚಾರಿಗಳು ಕಳಿಸಿದ) ಒಂದು ಸಂದೇಶವಾದಳು.

"ಓಡಿಹೋಗಿ, ಇಲ್ಲದಿದ್ದರೆ ಹೀಗೇ..." ಎಂಬ ಸಂದೇಶ ಅವಳ ರೂಪದಲ್ಲಿ ಆ ಜನರಿಗೆ ಸಿಕ್ಕಿತ್ತು.

ಅಂದಿನಿಂದಲೂ ದರ್‌ಫರ್‌ನಲ್ಲಿ ಹೀಗೆ ಅತ್ಯಾಚಾರಕ್ಕೆ ಬಲಿಯಾದವರ ಮೈಮೇಲೆ ಗಾಯಮಾಡಿ ಅದರ ಕಲೆ ಉಳಿಯುವಂತೆ ಮಾಡುವುದು ತುಂಬ ವ್ಯಾಪಕವಾಗಿ ಹಬ್ಬಿದೆ. ಅಲ್ಲಿನ ಹೆಂಗಸರಿಗೆ ಇಂಥ ಸ್ಪಷ್ಟವಾದ ಕಳಂಕ ಚಿನ್ಹೆಗಳನ್ನು ಹೊಂದಿರುವ ಅಥವಾ ಕಲೆಗಳನ್ನು ಮಾಡುವುದೇ ಒಂದು ರೂಢಿ ಆಗಿದೆ. ಆಗಾಗ್ಗೆ ಕೆಲವರ ಕಿವಿಗಳನ್ನೇ ಕತ್ತರಿಸಿದ್ದಾರೆ. ಈ ಕಾರ್ಯ ನಡೆಸುವವರು ಪೊಲೀಸ್ ಅಧಿಕಾರಿಗಳೋ ಅಥವಾ ಸೈನಿಕರೋ ಆಗಿದ್ದು ಅವರು ಸಮವಸ್ತ್ರದಲ್ಲಿ ಇದ್ದೇ ಈ ಕಾರ್ಯ ನಡೆಸುವ ಮೂಲಕ ಸರ್ಕಾರದ (ಅತ್ಯಾಚಾರ) ನೀತಿಯ ಜೊತೆ ಕೈಗೂಡಿಸಿರುತ್ತಾರೆ.

**ಅತ್ಯಾಚಾರ–ಬೆಂಬಲಿಸುವಂಥ ವಿದೇಶಾಂಗ ನೀತಿ?**

ಸೂಡಾನ್ ದೇಶವು ದರ್‌ಫರ್‌ನಲ್ಲಿ ತಳೆದ ನೀತಿಯನ್ನು ದಕ್ಷಿಣ ಆಫ್ರಿಕಾ, ಚೀನಾ, ಲಿಬ್ಯಾ ಮತ್ತು ಇಂಡೋನೇಷಿಯಾ ದೇಶಗಳೆಲ್ಲ ಬೆಂಬಲಿಸಿವೆ. ಅಂದರೆ ಆ ಎಲ್ಲಾ ದೇಶಗಳೂ ಅತ್ಯಾಚಾರಪರವಾದ ವಿದೇಶಾಂಗ ನೀತಿಯನ್ನು ಸ್ವೀಕರಿಸಿವೆ ಎಂದು ಅರ್ಥವೆ? →

ಮಾಡಿಕೊಂಡರು. ತಮ್ಮ ಹೆಂಗಸರು, ಮಕ್ಕಳಮೇಲೆ ರಷ್ಯಾಸೈನಿಕರು ಅತ್ಯಾಚಾರ ನಡೆಸಿದ ಬಳಿಕ ಸ್ವತಃ ತಂದೆಯರು, ಗಂಡಂದಿರು, ಶಿಕ್ಷಕರೂ ಅವರನ್ನು ಆತ್ಮಹತ್ಯೆಗೇ ಪ್ರೋತ್ಸಾಹಿಸುತ್ತಿದ್ದುದಕ್ಕೆ ಅವರಿಗೆ 'ಘನತೆ ಗೌರವ'ಗಳೇ ಮುಖ್ಯ ಎಂಬುದೇ ಪ್ರಬಲ ಕಾರಣವಾಗಿತ್ತು.

ಮದುವೆಗೆ ಮೊದಲೇ ಲೈಂಗಿಕ ಸಂಭೋಗಕ್ಕೆ ಒಳಗಾಗುವುದೆಂದರೆ ಅನೇಕ ಹೆಣ್ಣುಮಕ್ಕಳಿಗೆ ಸಾವಿಗಿಂತ ಕೇಡಿನ ಸಂಗತಿಯಾಗಿರುತ್ತದೆ. ಆದ್ದರಿಂದ ಯುದ್ಧಕಾಲದ ಈ ಬಗೆಯ ನಿರ್ದಿಷ್ಟ ಅಪರಾಧದ ಬಗ್ಗೆ ಇದುವರೆಗೂ ಯಾರೂ ಸ್ವಲ್ಪವೂ ಗಮನ ಹರಿಸಿಲ್ಲ ಎಂಬುದು ಢಾಳಾಗಿ ಎದ್ದು ತೋರುವ, ಯಾತನಾದಾಯಕ ಸಂಗತಿಯಾಗಿದೆ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಸೈನಿಕರು ಅತ್ಯಾಚಾರ ನಡೆಸುವುದನ್ನು ನಿಷೇಧಿಸುವ ಕಾನೂನು ಅಂತಾರಾಷ್ಟ್ರೀಯ ನ್ಯಾಯಕ್ಷೇತ್ರದಲ್ಲಿ ಬಲವಾಗಿ ಸ್ಥಾಪಿತವೇನೋ ಆಯಿತು. ಆದರೆ ಯುದ್ಧಾನಂತರ ನ್ಯೂರೆಂಬರ್ಗ್ ಹಾಗೂ ಟೋಕಿಯೋಗಳಲ್ಲಿ ನಡೆಸಲಾದ ಅಗಾಧ ಪ್ರಮಾಣದ ಯುದ್ಧ ಅಪರಾಧಗಳ ಪೈಕಿ ಶಿಕ್ಷೆಗೆ ಒಳಗಾಗಿದ್ದು ಎಲ್ಲೋ ಬೆರಳೆಣಿಕೆಯಷ್ಟು ಕೇಸ್‌ಗಳಲ್ಲಿ ಮಾತ್ರ.

**ಸ್ಮಾರಕ ಅವಶ್ಯಕವಿದೆ:**

ರ್‍ವಾಂಡಾದಲ್ಲಿ ಹೆಣ್ಣುಮಕ್ಕಳ ಸಾಮೂಹಿಕ ಹತ್ಯೆ ಜರುಗಿಸುವ ಮೊದಲು ಅವರ ಮೇಲೆ ಸಾಮೂಹಿಕವಾಗಿ ಅತ್ಯಾಚಾರವನ್ನೂ ನಡೆಸಲಾಗಿತ್ತು. ರ್‍ವಾಂಡಾ ಟ್ರಿಬ್ಯುನಲ್‌ನ ವಿಚಾರಣೆ-ಶಿಕ್ಷೆಗಳ ದಾಖಲೆಗಳಲ್ಲಿ ಮಾತ್ರ ಲೈಂಗಿಕ ದುರಾಕ್ರಮಣಗಳನ್ನು ಆಕಸ್ಮಿಕವೆಂದೋ ಗೌಣವೆಂದೋ ಪರಿಗಣಿಸಲಾಗಿತ್ತು. ರ್‍ವಾಂಡಾದ ಒಬ್ಬ ಮಹಿಳೆ ಆ ತನಿಖೆ ನಡೆಯುತ್ತಿರುವಾಗ ನ್ಯಾಯಾಧೀಶರ ಮುಂದೆ ಹಠಾತ್ತಾಗಿ ತಾನೂ, ಹತ್ಯೆಯಾಗಿದ್ದ ಇತರ ಮಹಿಳೆಯರೂ ಹತ್ಯಾಕಾಂಡಕ್ಕೆ ಮೊದಲು ಅತ್ಯಾಚಾರಕ್ಕೆ ಬಲಿಯಾಗಿದ್ದುದನ್ನು ಬಹಿರಂಗಪಡಿಸಿದಳು. ಆ ವಿಚಾರವನ್ನು ಒಬ್ಬ ಮಹಿಳಾ ನ್ಯಾಯಾಧೀಶರು ತನಿಖೆಗೆ ಒಳಗು ಮಾಡಿದ್ದರಿಂದ ಮಹಿಳೆಯರ ಸಾಮೂಹಿಕ ಹತ್ಯಾಕಾಂಡಕ್ಕೆ ಮೊದಲು ಬೃಹತ್ ಪ್ರಮಾಣದಲ್ಲಿ ಅವರು ಲೈಂಗಿಕ ಹಿಂಸಾಚಾರಕ್ಕೂ ಬಲಿಯಾಗಿದ್ದ ವಾಸ್ತವಾಂಶವು ಬೆಳಕಿಗೆ ಬಂದಿತು. ಇದು ರ್‍ವಾಂಡಾ ಟ್ರಿಬ್ಯುನಲ್ ಅತ್ಯಾಚಾರವನ್ನು ಸ್ತ್ರೀಹತ್ಯೆಯ ಕಾರ್ಯಾಚರಣೆ (operation gynecide) ಎಂದು ಬಣ್ಣಿಸಿದ ಮೊಟ್ಟಮೊದಲ (ಜಾಗತಿಕ) ನ್ಯಾಯಾಲಯವಾಗಿದೆ.

ಇಂಥ ನೀಚ, ಕ್ರೂರ ಅಪರಾಧಗಳ ಮುಖ್ಯ ವೈಲಕ್ಷಣ್ಯವೆಂದರೆ ಅಪರಾಧಿಗಳಿಗೆ ಯಾವುದೇ ಶಿಕ್ಷೆ ಆಗದಿರುವುದು. ಇಂಥ ಅಭದ್ರತೆ ಇಲ್ಲವಾಗಬೇಕು. ಅತ್ಯಾಚಾರ ಮತ್ತು ಮಹಿಳೆಯರ ಮೇಲೆ ನಡೆಸಲಾಗುವ ಬೇರೆ ಬಗೆಯ ಲೈಂಗಿಕ ಹಿಂಸಾಚಾರಗಳನ್ನು ಸರ್ಕಾರಗಳು, ಪಾರ್ಲಿಮೆಂಟ್ ಸದಸ್ಯರು, ಮಿಲಿಟರಿ ನಾಯಕರು, ಜನಾಭಿಪ್ರಾಯ ಉಂಟುಮಾಡಬಲ್ಲ ಸಾಮಾಜಿಕ ನಾಯಕರೂ ಬಹಿರಂಗ ಚರ್ಚೆಗೆ ಒಳಗುಮಾಡಬೇಕು. ಮತ್ತು ತಪ್ಪಿತಸ್ಥರನ್ನು ಕಠೋರವಾಗಿ ಶಿಕ್ಷಿಸುವುದು ಕಡ್ಡಾಯವಾಗಬೇಕು. ಅಂತಾರಾಷ್ಟ್ರೀಯ ಅಪರಾಧ ಕಮಿಷನ್ ಮತ್ತು ಇತರ ನ್ಯಾಯಾಲಯಗಳು ಈ ನಿಟ್ಟಿನ ಸ್ಪಷ್ಟ ಎಚ್ಚರಿಕೆ ನೀಡಬೇಕು.

ಯುದ್ಧಗಳಲ್ಲಿ ಪ್ರಾಣಬಿಟ್ಟ ಸೈನಿಕರಿಗೆ ಅವರ ಕುಟುಂಬಕ್ಕೆ ಸ್ಮಾರಕ, ಆರ್ಥಿಕ ಸವಲತ್ತು, ವಿಧ್ಯುಕ್ತ ಶೋಕಾಚರಣೆಗಳನ್ನು ನೀಡಲಾಗುವ ಹಾಗೆ, ಸೈನಿಕರಿಗೆ ಬಲಿಯಾದ ಮಹಿಳೆಯರಿಗೆ ಯಾವುದೇ ಆರ್ಥಿಕ ಸವಲತ್ತು, ಸ್ಮಾರಕ, ವಿಧ್ಯುಕ್ತ ಅಂತ್ಯಸಂಸ್ಕಾರಗಳಿಲ್ಲ. ಈ ಪರಿಸ್ಥಿತಿಯೂ ಬದಲಾಗಬೇಕು. ಅಂತಾರಾಷ್ಟ್ರೀಯ ಅಪರಾಧ ನ್ಯಾಯಾಲಯದಲ್ಲಿ ಅತ್ಯಾಚಾರದ ಬಲಿಪಶುವಾದ ಅನಾಮಿಕ ಮಹಿಳೆಯ ಸಂಕೇತವಾದ ಸ್ಮಾರಕವೊಂದನ್ನು ನಿರ್ಮಿಸಬೇಕು. ಆಗಲಾದರೂ ಆ ನ್ಯಾಯಾಲಯದ ನ್ಯಾಯಾಧೀಶರು ಮಹಿಳೆಯರ ಮೇಲಿನ ಲೈಂಗಿಕ ಹಿಂಸಾಚಾರಗಳತ್ತ ಹೆಚ್ಚು ಗಮನ ಹರಿಸಬಹುದು.

*–[ಕೃಪೆ : The Gardian ಮತ್ತು Deccan Herald]*



ಪೂರ್ವ-ಕಾಂಗೋ ಪ್ರಪಂಚದ ಅತ್ಯಾಚಾರದ ರಾಜಧಾನಿಯಾಗಿದೆ. ಅಲ್ಲಿ ಕೆಲವು ಜಾಗಗಳಲ್ಲಿ ೩/೪ ಭಾಗ ಮಹಿಳೆಯರು ಅತ್ಯಾಚಾರಕ್ಕೆ ಬಲಿಯಾದವರೇ. ಕೆಲವು ಸಲ ಇಂಥ ಅತ್ಯಾಚಾರಕ್ಕೆ ಮೊನಚಾದ ಕಡ್ಡಿಗಳನ್ನು ಬಳಸಲಾಗುತ್ತದೆ. ಅದರಿಂದ ಅತ್ಯಾಚಾರಕ್ಕೆ ಬಲಿಯಾದ ಹೆಂಗಸರು ಆಂತರಿಕವಾದ ಗಾಯಗಳಿಂದಾಗಿ ತಡೆಯಲಾಗದಷ್ಟು ಯಾತನೆಗೆ ಒಳಗಾಗುತ್ತಾರೆ. ವಿಶ್ವಸಂಸ್ಥೆಯ ರಕ್ಷಕ ಸೈನ್ಯದ ಒಬ್ಬ ಮಾಜಿ ಕಮಾಂಡರ್ ಆದ ಪ್ಯಾಟ್ರಿಕ್ ಕ್ಯಾಮರ್ಟ್ ಹೇಳುವ ಪ್ರಕಾರ ಆ ದೇಶದಲ್ಲಿ "ಹೆಣ್ಣಾಗಿರುವುದೆಂದರೆ ಸೈನಿಕನಾಗಿರುವುದಕ್ಕಿಂತ ಹೆಚ್ಚು ಭಯಂಕರ ಸ್ಥಿತಿ."

ಈ ವಿಷಯದಲ್ಲಿ ಅಂತರರಾಷ್ಟ್ರೀಯ ಸಮುದಾಯಗಳ ಇದುವರೆಗಿನ ಪ್ರತಿಕ್ರಿಯೆ ಏನು? ಹೆಚ್ಚು ಕಡಿಮೆ "ಇದು ನಮ್ಮ ಸಮಸ್ಯೆಯಲ್ಲ" ಎಂಬುದಷ್ಟೆ. ಹೀಗಿದ್ದರೂ ಇಂಥ ಸಾಮೂಹಿಕ ಅತ್ಯಾಚಾರಗಳು ಸಂಘರ್ಷ ನಿಲುಗಡೆ ಆದನಂತರದ ಶಾಂತಿಯ ಮರುಸ್ಥಾಪನೆಗೂ ಸವಾಲೊಡ್ಡುತ್ತವೆ. ಶಾಂತಿ ನೆಲೆಸಿದ ನಂತರವೂ ಲೈಂಗಿಕ ಹಿಂಸಾಚಾರಗಳು ತಲೆದೋರುತ್ತಲೇ ಇರುತ್ತವೆ. ಲೈಬೀರಿಯಾದಲ್ಲಿ ಆಂತರಿಕ ಯುದ್ಧವೇನೋ ನಿಂತಿದೆ. ಆದರೆ ಅತ್ಯಾಚಾರ ಮಾತ್ರ ಸಾಂಕ್ರಾಮಿಕ ರೋಗವಾಗಿ ಹರಡುತ್ತಲೇ ಇದೆ, ಮತ್ತು ವರದಿಯಾಗಿರುವ ಅತ್ಯಾಚಾರ ಪ್ರಕರಣಗಳಲ್ಲಿ ಬಲಿಯಾಗಿರುವವರು ಅರ್ಧದಷ್ಟು ೧೮ ವರ್ಷಕ್ಕಿಂತ ಕೆಳಗಿನ ಎಳೆಯ ಹುಡುಗಿಯರು.

ವಿಶ್ವಸಂಸ್ಥೆಯೂ, ಅದರ ಸದಸ್ಯರಾಷ್ಟ್ರಗಳೂ ಯಾತನಾದಾಯಕವಾಗುವಷ್ಟು ನಿಧಾನವಾಗಿ ಈ ವ್ಯವಸ್ಥಿತ ಸಾಮೂಹಿಕ ಅತ್ಯಾಚಾರ ಕೂಡ ಕೊನೆಯ ಪಕ್ಷ DVDಯ ಪೈರೇಟ್ ವ್ಯವಹಾರದಷ್ಟೇ! ಅಂತರರಾಷ್ಟ್ರೀಯ ರಾಕ್ಷಸೀಕೃತ್ಯ ಎಂಬುದನ್ನು ಮನಗಾಣುತ್ತಿರುವಂತೆ ತೋರುತ್ತದೆ.

ಸಾಮೂಹಿಕ ಅತ್ಯಾಚಾರಕ್ಕೆ ಬಲಿಪಶುಗಳಾದವರಿಗೆ ಆರೋಗ್ಯ-ವೈದ್ಯಕೀಯ ಸೇವೆಗಳನ್ನು ಒದಗಿಸಲು ಇನ್ನೂ ಹೆಚ್ಚು ಬಲವಾದ ಕ್ರಮಗಳನ್ನು ವಿಶ್ವಸಂಸ್ಥೆ ಕೈಗೊಳ್ಳಬೇಕಾಗಿದೆ. ಶಾಂತಿರಕ್ಷಕ ದಳಗಳಿಗೆ ಇಂಥ ಹಿಂಸಾಚಾರಕ್ಕೆ ತಡೆಯೊಡ್ಡುವಂತೆ ಒತ್ತಾಯಿಸಬೇಕಾಗಿದೆ.

ಈ ವಾರ ಜಗತ್ತಿನ ನಾಯಕರು, ರಾಜನೀತಿಜ್ಞರು ತಮ್ಮ ಜಡತೆಯ ಬಗ್ಗೆ ನೆಪಗಳನ್ನು ಹೇಳುವುದನ್ನು ನಿಲ್ಲಿಸುತ್ತಾರೆಂದು, ಆ ಕಾಂಗೋ ಹೆಣ್ಣುಮಕ್ಕಳು ದಿಟ್ಟತನದಿಂದ ಸತ್ಯಬಹಿರಂಗ ಪಡಿಸಿದ್ದನ್ನು ಪುರಸ್ಕರಿಸಲು ಆರಂಭಿಸುತ್ತಾರೆಂದೂ ಆಶಿಸೋಣ.

*ಕೃಪೆ: ದಿ ಹಿಂದೂ ಮತ್ತು*
*ನ್ಯೂಯಾರ್ಕ್ ಟೈಮ್ಸ್ ನ್ಯೂಸ್ ಸರ್ವೀಸ್*

# 'ಮಹಿಳೆ: ಅನುಭವ ಅಭಿವ್ಯಕ್ತಿ: ಒಂದು ಮುಖಾಮುಖಿ'

*ಜೂನ್ ೭ ಮತ್ತು ೮, ೨೦೦೮ರಲ್ಲಿ ಕುಪ್ಪಳಿಯಲ್ಲಿ 'ಕನ್ನಡ ಮತ್ತು ಸಂಸ್ಕೃತಿ ಇಲಾಖೆ' ಹಾಗೂ 'ಕುವೆಂಪು ಪ್ರತಿಷ್ಠಾನ'ದ ನೆರವಿನೊಡನೆ 'ನಮ್ಮ ಮಾನಸ' ಪತ್ರಿಕೆಯು 'ಮಹಿಳೆ : ಅನುಭವ-ಅಭಿವ್ಯಕ್ತಿ: ಒಂದು ಮುಖಾಮುಖಿ' ಕಾರ್ಯಾಗಾರವನ್ನು ಹಮ್ಮಿಕೊಂಡಿತ್ತು. ಮಹಿಳೆಯರ ಸಾಂಸ್ಕೃತಿಕ ಅನುಭವಗಳು ವೈವಿಧ್ಯವೂ ಸಂಕೀರ್ಣವೂ ಆಗಿರುತ್ತವೆ. ಆದರೆ ಅವುಗಳ ಶಿಷ್ಟರೂಪದ ಅಭಿವ್ಯಕ್ತಿಯಲ್ಲಿ ಬೇರಿನ ನೆಲೆಯ ಅನುಭವಗಳನ್ನು ಅಭಿವ್ಯಕ್ತಿಸುವ ಪ್ರಯತ್ನಗಳು ಅಷ್ಟಾಗಿ ಇಲ್ಲ ಎನ್ನುವ ಆಕ್ಷೇಪ ಕೇಳಿಬರುತ್ತಿದೆ. ಸೃಜನಶೀಲ ಲೇಖಕಿಯರು, ಕಲಾಕಾರರು ಹಾಗೂ ಕಾರ್ಯಕರ್ತರ ಮಧ್ಯದಲ್ಲಿನ ಕಂದಕಗಳೂ ಸಹ ಇದಕ್ಕೆ ಕಾರಣವಾಗಿರಬಹುದು. ಈ ನಿಟ್ಟಿನಲ್ಲಿ ಬೇರೆ ಬೇರೆ ಕ್ಷೇತ್ರದ ಅನುಭವಗಳು ಹಾಗೂ ಸೃಜನಶೀಲ ಅಭಿವ್ಯಕ್ತಿಯ ವಿವಿಧ ವಲಯಗಳನ್ನು ಮುಖಾ-ಮುಖಿಯಾಗಿಸುವ ಉದ್ದೇಶ ಹೊಂದಿದ ಕಾರ್ಯಾಗಾರವನ್ನು ಎರಡು ದಿನ ಕುಪ್ಪಳಿಯ ಸುಂದರವಾದ ಪ್ರಕೃತಿಯ ಮಡಿಲಲ್ಲಿ ಹಮ್ಮಿಕೊಳ್ಳಲಾಗಿತ್ತು. ಅದರ ಸಂಕ್ಷಿಪ್ತ ವರದಿಯನ್ನು ಇಲ್ಲಿ ನೀಡುತ್ತಿದ್ದೇವೆ. ಮುಂದೆ ಪುಸ್ತಕರೂಪದಲ್ಲಿ ಪ್ರಕಟಿಸಲಾಗುವುದು. -ಸಂ.*

**ಸು**ಮಾರು ೩೫ ಮಂದಿ ಮಹಿಳೆಯರು ಭಾಗವಹಿಸಿದ ಕಾರ್ಯಾಗಾರವು ಕುಪ್ಪಳಿಯಲ್ಲಿ ಜೂನ್ ೭, ೨೦೦೮ರಂದು ಖ್ಯಾತಗಾಯಕಿ ವಾಸಂತಿಶೆಣೈ ಅವರ ಕುವೆಂಪು ಕವಿತಾ ಗಾಯನದಿಂದ ಆರಂಭವಾಯಿತು. ಕಾರ್ಯಕ್ರಮ ಉದ್ಘಾಟಿಸಿದ ಕುವೆಂಪು ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀಯುತ ಕಡಿದಾಳ್ ಪ್ರಕಾಶ್‌ರವರು ಕಾರ್ಯಾಗಾರದ ಸಫಲತೆಗೆ ಶುಭಕೋರಿ ಹಾರೈಸಿದರು. ಆಶಯ ಭಾಷಣ ಮಾಡಿದ ಲೇಖಕಿ ಡಾ. ಬಿ.ಎನ್. ಸುಮಿತ್ರಾಬಾಯಿಯವರು "ಕ್ರಿಯಾಶೀಲ ವ್ಯಕ್ತಿಗಳ ಅನುಭವಕ್ಕೂ ಸೃಜನಶೀಲ ಪ್ರತಿನಿಧೀಕರಣಕ್ಕೂ ಸಂಬಂಧವಿಲ್ಲವೇನೋ ಎನ್ನುವ ಪರಿಸರವಿದೆ. ಇವೆರೆಡು ಪರಸ್ಪರ ಪೂರಕ ಎನ್ನುವುದನ್ನು ತೋರಿಸಲು ಈ 'ಮಿಥ್' ಒಡೆಯ ಬೇಕು. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳ ಇಂದಿನ ಸನ್ನಿವೇಶದಲ್ಲಿ ಸಾಮೂಹಿಕ ಚಳವಳಿಗಳು ಮುಸುಕಿಟ್ಟಂತಾಗಿವೆ. ಪ್ರತ್ಯೇಕತಾವಾದಕ್ಕೆ ಬದಲಾಗಿ 'ಒಳಗೊಳ್ಳುವಿಕೆ' ಬೇಕಿದೆ" ಎಂದರು. ಡಾ. ವಿಜಯಾ ಅವರು ಅಧ್ಯಕ್ಷತೆ ವಹಿಸಿದ್ದರು.



ಮೊದಲ ಗೋಷ್ಠಿ '**ಸಮೂಹ ಚಳವಳಿಗಳು : ಮಹಿಳಾ ಅನುಭವ ಅಭಿವ್ಯಕ್ತಿ**'ಯಲ್ಲಿ ಮಾತನಾಡಿದ ರೈತ ನಾಯಕಿ ಸುನಂದಾ ಜಯರಾಂರವರು ರೈತ ಚಳವಳಿ ನಡೆದು ಬಂದ ದಾರಿಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿ, ಈ ಚಳವಳಿಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಕಡಿಮೆ ಎಂದು ತಿಳಿಸಿದರು. ಶೇ ೮೦ ಭಾಗ ಹಳ್ಳಿಗಳಲ್ಲಿ ವಾಸಿಸುವ ಅನಕ್ಷರಸ್ಥರೇ ಚಳವಳಿಯಲ್ಲಿ ಭಾಗಿಗಳು. ಉತ್ತರ ಕರ್ನಾಟಕದ ಮಹಿಳೆಯರಿಗೆ ಚಳವಳಿಯ ಅರಿವಿಲ್ಲ. ಅಲಸಂದ್ರದ ಅನಸೂಯಮ್ಮ, ದಾಕ್ಷಾಯಣಮ್ಮ, ಬಸಮ್ಮ ಮುಂತಾದವರು ಚಳವಳಿಯಲ್ಲಿದ್ದರೂ ಮಹಿಳಾ ನಾಯಕತ್ವ ಲಭ್ಯವಾಗಲಿಲ್ಲ. ಕೆಂಟಕೀ ಚಿಕನ್ ಮತ್ತು ಕಾರ್ಗಿಲ್ ಬೀಜ ನಾಶದ ಹೋರಾಟಗಳಲ್ಲಿ ಮಹಿಳೆಯರೇ ಮುಂದಾಳತ್ವ ವಹಿಸಿದ್ದರೂ ಮಾಧ್ಯಮಗಳಲ್ಲಿ ಅದು ವರದಿಯಾಗಲಿಲ್ಲ ಎನ್ನುವ ವಾಸ್ತವವನ್ನು ಬಿಚ್ಚಿಟ್ಟರು. ರೈತ ಚಳವಳಿಯಲ್ಲಿ ತಮಗೆ ಭಾಗಿಯಾಗಲು ಸಾಧ್ಯವಾದುದು ಮನೆಗೆ ಅತಿಯಾಗಿ ಅಂಟಿಕೊಳ್ಳದಿರುವಿಕೆಯಿಂದ ಎನ್ನುವುದನ್ನು ತಿಳಿಸಿದರು. ರೈತ ಚಳವಳಿಗೆ ಮಹಿಳೆಯರ ಬಗ್ಗೆ ಗೌರವ ಇದ್ದರೂ ರಾಜಕೀಯವಾಗಿ ಆಯ್ಕೆಯಾಗಲು ಅವಕಾಶ ನೀಡಲಿಲ್ಲ ಎಂದ ಇವರು ಸಮೂಹ ನಾಯಕತ್ವದ ಮೇಲೆ ಒತ್ತು ನೀಡಿದರು. ಶ್ರೇಣೀಕೃತ ವ್ಯವಸ್ಥೆ. ವ್ಯಕ್ತಿಗತ ನಿರ್ಧಾರಗಳು ಚಳವಳಿಯನ್ನು ಬೆಳೆಸುವುದಿಲ್ಲ. ನಾಯಕತ್ವ ಹಿಂದಿದ್ದು ಚಳವಳಿಯನ್ನು ಮುನ್ನಡೆಸಬೇಕು. ಈ ದೃಷ್ಟಿಕೋನದಿಂದ ರೈತ ಚಳವಳಿ, ರೈತ ಚಳವಳಿಯಲ್ಲಿ ಮಹಿಳಾ ಭಾಗವಹಿಸುವಿಕೆ, ಮಹಿಳಾ ನಾಯಕತ್ವ ಬೆಳೆಯಬೇಕಾಗಿದೆ ಎಂದರು. ವ್ಯಕ್ತಿಗಿಂತ ಚಳವಳಿ ಮುಖ್ಯ ಎಂಬುದು ನಮ್ಮಲ್ಲಿ ಅಂತರ್ಗತವಾಗಬೇಕಾದ ವಿಚಾರ ಎಂಬ ಆಶಯವನ್ನು ವ್ಯಕ್ತಪಡಿಸಿದರು.

'ಸಾಗುವಳಿ' ಪತ್ರಿಕೆಯ ಸಂಪಾದಕಿ ವಿ. ಗಾಯತ್ರಿಯವರ ಅನುಪಸ್ಥಿತಿಯಲ್ಲಿ ಅವರ ಲೇಖನವನ್ನು ನಿರ್ಮಲಾ ಅವರು ಓದಿದರು. ಸಾವಯವ ಕೃಷಿಯಲ್ಲಿ ಆಸಕ್ತಿಯಿಲ್ಲ, ಕೃಷಿಭೂಮಿ ಹರಿದು ಹಂಚಿಹೋಗಿದೆ, ಕೃಷಿಕೂಲಿಯಲ್ಲಿ ತಾರತಮ್ಯವಿದೆ. ಹಿಂದಿನ ವೈವಿಧ್ಯಮಯ ಬೆಳೆಗೆ ಬದಲು ವಾಣಿಜ್ಯ ಬೆಳೆಗಳ ಕಡೆಗೆ ರೈತ ಹೋಗುತ್ತಿದ್ದಾನೆ ಎನ್ನುವುದು ಬರವಣಿಗೆಯ ಸಾರ. ಕೃಷಿ ಮಹಿಳೆ ಶಿವಮ್ಮನವರ ಅನುಭವದ ಹಿನ್ನೆಲೆಯಿದ್ದ ಲೇಖನ ಪುರುಷರ ಅರಿವಿಗೆ ಬಾರದಂತೆ ಮಹಿಳೆ ಮುಖ್ಯ ಬೆಳೆಯೊಂದಿಗೆ ಇತರ ಬೀಜ ಬಿತ್ತಿ, ಅಲ್ಲಿ ನಷ್ಟವಾದರೂ ಇಲ್ಲಿ ತುಂಬಿಕೊಡುವುದರ ಮೇಲೆ ಬೆಳಕು ಚೆಲ್ಲಿತು. ರೈತರ ಆತ್ಮಹತ್ಯೆ, ಕೃಷಿನೀತಿ, ಆಹಾರ ಸಮಸ್ಯೆ, ಸರ್ಕಾರದ ವೈಫಲ್ಯ ಕುರಿತು ಆ ನಂತರ ಚರ್ಚೆ ನಡೆಯಿತು.

ಅಸಂಘಟಿತ ವಲಯ ಕುರಿತು ಮಾತನಾಡಿದ ಕಾರ್ಮಿಕ ಸಂಘಟನೆಯ ಕಾರ್ಯಕರ್ತೆ ವರಲಕ್ಷ್ಮಿಯವರು ಜಾಗತೀಕರಣ ಹಾಗೂ ಸರ್ಕಾರದ ನೀತಿಯಿಂದ ಅಸಂಘಟಿತವಲಯದಲ್ಲಿ ಕೆಲಸ



ಉದ್ಘಾಟನೆ : ಡಾ. ಎಲ್.ಸಿ. ಸುಮಿತ್ರ, ಡಾ. ವಿಜಯಾ, ಕಡಿದಾಳು ಪ್ರಕಾಶ್, ಡಾ. ಬಿ.ಎನ್. ಸುಮಿತ್ರಾಬಾಯಿ

ಹಂಚಿಹೋಗಿದ್ದು ಶ್ರಮದ ಸ್ವರೂಪವೇ ಬದಲಾಗಿದೆ ಎಂದರು. ದೇಶದಲ್ಲಿ ೧೨ ಕೋಟಿ ಮಹಿಳಾ ಕಾರ್ಮಿಕರಿದ್ದು, ಇವರಲ್ಲಿ ಶೇ ೯೦ರಷ್ಟು ಮಹಿಳೆಯರು ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿದ್ದಾರೆ ಎಂದರು. ಮೂಲಭೂತ ಹಕ್ಕುಗಳು, ಕಾರ್ಮಿಕ ಕಾನೂನುಗಳು ಇವರಿಗೆ ಅನ್ವಯಿಸುವುದಿಲ್ಲ ಎಂಬುದನ್ನು ವರಲಕ್ಷ್ಮಿಯವರು ಅಂಕಿ ಅಂಶಗಳ ಸಮೇತ ವಿವರಿಸಿದರು. ಅಗರಬತ್ತಿ, ಬೀಡಿ, ಸಿದ್ಧ ಉಡುಪು, ಅಂಗನವಾಡಿ ಇಂತಹ ವಲಯಗಳಲ್ಲಿ ಬದಲಾವಣೆಯಾಗದೇ ಸಾಮಾಜಿಕ ಬದಲಾವಣೆ ಸಾಧ್ಯವಿಲ್ಲ. ಜಾಗತೀಕರಣದಿಂದಾಗಿ ದೊಡ್ಡ ದೊಡ್ಡ ಉದ್ಯಮಗಳಿಗೆ ಬದಲಾಗಿ ಸಣ್ಣ ಉದ್ಯಮದ ಉತ್ಪಾದನೆಗಳು ಹೆಚ್ಚಾಗಿವೆ. ಅಲ್ಲಿ ಬದಲಿ, ದಿನಗೂಲಿ, ತಾತ್ಕಾಲಿಕ ಉದ್ಯೋಗಿಗಳನ್ನು ನೇಮಿಸಿಕೊಳ್ಳಲಾಗುತ್ತಿದೆ. ಇದರಿಂದ ಕಡಿಮೆ ಹಣದಲ್ಲಿ ಅಧಿಕ ಉತ್ಪಾದನೆ ಎನ್ನುವುದನ್ನು ಬಂಡವಾಳಶಾಹಿ ಕಂಡುಕೊಂಡಿದೆ ಎಂಬುದನ್ನು ವರಲಕ್ಷ್ಮಿಯವರು ವಿವರಿಸಿ ಹೇಳಿದರು. ಸಮಗ್ರ ಮಸೂದೆ, ಕಾರ್ಮಿಕರ ಗುರುತಿನ ಚೀಟಿ, ಕನಿಷ್ಠ ವೇತನ ಇವುಗಳ ಸುತ್ತ ಸಮಗ್ರ ಹೋರಾಟ ಅಗತ್ಯವಿದೆ. ಕಾರ್ಮಿಕರ ಮೇಲೆ ಆಗುತ್ತಿರುವ ಅಡ್ಡ ಪರಿಣಾಮಗಳನ್ನು ಕುರಿತು ಅಧ್ಯಯನ ನಡೆಸುವುದು, ಅಭಿವ್ಯಕ್ತಿಸುವುದು ಚಳವಳಿಗೆ ಬಲ ನೀಡುತ್ತದೆ. ಮ್ಯಾಕ್ಸಿಂ ಗಾರ್ಕಿಯವರ 'ತಾಯಿ' ಮತ್ತು ನಮ್ಮ ಬಸವಣ್ಣನವರಂತೆ ಕರ್ತೃತ್ವ ಶಕ್ತಿ ಮೂಡಿಸುವ ಬರಹ, ನಾಟಕಗಳ ಅಗತ್ಯವಿದೆ ಎನ್ನುತ್ತಾ ಅಸಂಘಟಿತ ವಲಯದ ಕಾರ್ಮಿಕರ ಬದುಕು ಸಾಹಿತ್ಯದಲ್ಲಿ ಚಿತ್ರಿತವಾಗುವ ಬಗ್ಗೆ ನೀವೆಲ್ಲ ಯೋಚಿಸಬೇಕಾಗಿದೆ ಎಂದು ಲೇಖಕಿಯರು, ಕಲಾವಿದರನ್ನು ಉದ್ದೇಶಿಸಿ ಹೇಳಿದರು.

ಇದೇ ಗೋಷ್ಠಿಯಲ್ಲಿ ಸಿದ್ಧ ಉಡುಪುಗಳ ಕಾರ್ಖಾನೆಗಳಲ್ಲಿ ಮಹಿಳೆಯರನ್ನು ಹೇಗೆ ಶೋಷಿಸಲಾಗುತ್ತಿದೆ ಎಂಬುದನ್ನು ಸ್ವಾನುಭವದ ಮೂಲಕ ತೆರೆದಿಟ್ಟವರು ಯಮುನ. ದಿನಕ್ಕೆ ೧೦-೧೨ ಗಂಟೆಗಳ ಕಾಲ ದುಡಿಸಿಕೊಳ್ಳುವ ಮಾಲಿಕರು, ಮಹಿಳೆಗೆ ಬೇಕಾದ ಶೌಚಾಲಯ, ಶುದ್ಧ ಹವೆ, ಹೆರಿಗೆ ರಜ, ವೈದ್ಯಕೀಯ ಸವಲತ್ತು, ಕನಿಷ್ಠ ಕೂಲಿ ಇವು ಯಾವ ಕಾನೂನಿನ ಯಾವ ಅಳತೆಗೋಲಿಗೂ ಸಿಗದೇ ಮಹಿಳಾ ಶೋಷಣೆ ಅವ್ಯಾಹತವಾಗಿ ನಡೆಯುವುದನ್ನು ವಿವರಿಸಿದರು. ಇದಲ್ಲದೇ ಅವಿರತವಾಗಿ ನಡೆಯುವ ಲೈಂಗಿಕ ಶೋಷಣೆ, ಐದು ವರ್ಷ ಆದರೆ ಖಾಯಂಗೊಳಿಸಬೇಕಾಗುತ್ತದೆ ಎಂದು ಸೇವೆಯನ್ನು ಕಡಿತಗೊಳಿಸುವುದು, ಕಾರ್ಮಿಕ ಸಂಘಟನೆಗಳಲ್ಲಿ ಇರಬಾರದು ಎಂದು ಒತ್ತಾಯ ಹೇರುವುದು ಇಂತಹ ದೌರ್ಜನ್ಯಗಳನ್ನು ಮಹಿಳಾ ಕಾರ್ಮಿಕರು ಎದುರಿಸುತ್ತಲೇ ಇರುತ್ತಾರೆ. ಕಾರ್ಮಿಕ ಸಹಪಾಠಿಯೊಬ್ಬರು ರಸ್ತೆಯಲ್ಲಿ ಸತ್ತಾಗ ಅದಕ್ಕೆ ಪ್ರತಿಕ್ರಿಯಿಸದೇ ಇದ್ದ ಮಾಲೀಕರ ವಿರುದ್ಧ ಕಾರ್ಮಿಕ ಸಂಘಟನೆಯ ಜೊತೆ ಸೇರಿ ಹೋರಾಡಿದ ಯಮುನ ಕಾರ್ಮಿಕ ಸಂಘಟನೆ ಅಗತ್ಯ, ಅದರಲ್ಲಿ ಕ್ರಿಯಾಶೀಲರಾಗಿರುವುದರಿಂದ ಮಾತ್ರ ತಮ್ಮ ಹಕ್ಕೊತ್ತಾಯ ಮಾಡಲು ಸಾಧ್ಯ ಎಂದರು.

ಅನಂತರ ಮಾತನಾಡಿದವರು ಪೌರಕಾರ್ಮಿಕರ ಬೆಂಬಲಿಗ ಗುಂಪಲ್ಲಿ ಸಕ್ರಿಯವಾಗಿ ಕೆಲಸ ಮಾಡುವ ಸೃಜನಶೀಲ ಬರಹಗಾರ್ತಿ ದು. ಸರಸ್ವತಿ. ಇವರು ಪೌರಕಾರ್ಮಿಕರ ಬವಣೆಯನ್ನು ಎಳೆ ಎಳೆಯಾಗಿ ಬಿಚ್ಚಿಟ್ಟರು. ಬೆಂಗಳೂರಿನಲ್ಲಿ ೧೦,೦೦೦ಕ್ಕಿಂತ ಹೆಚ್ಚು ಗುತ್ತಿಗೆ ಪೌರ ಕಾರ್ಮಿಕರಿದ್ದಾರೆ. ಇವರು ಅಸ್ಪೃಶ್ಯ ದಲಿತರು, ಹೆಚ್ಚಾಗಿ ಮಾದಿಗರು. ಶೇ ೮೦ಕ್ಕಿಂತ ಹೆಚ್ಚು ಮಹಿಳೆಯರಿದ್ದಾರೆ. ಇವರೆಲ್ಲ ಅನಕ್ಷರಸ್ಥರು. ಕಸ ಗುಡಿಸುವ, ಮೋರಿ ಸ್ವಚ್ಛಗೊಳಿಸುವ, ಸತ್ತ ಪ್ರಾಣಿಗಳನ್ನು ಎತ್ತಿಹಾಕುವ – ಹೀಗೆ ಹತ್ತಾರು ಕೆಲಸ ಮಾಡುವ ಇವರಿಗೆ ಕಡಿಮೆ ಕೂಲಿ ಕೊಟ್ಟು ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸಲಾಗುತ್ತಿದೆ. ಕನಿಷ್ಠ ವೇತನ




ರತಿ ರಾವ್


ಶಾಂತಮ್ಮ


ಸವಿತಾ


ಎಸ್. ಮಾಲತಿ


ಪ್ರೀತಿ ಶುಭಚಂದ್ರ

ಕೂಡಾ ಇವರಿಗೆ ಇಲ್ಲ. ಇವರೆಲ್ಲ ಬಹುತೇಕ ಆಂಧ್ರಮೂಲದ ಅನಂತಪುರ ಜಿಲ್ಲೆಯವರು. ಕೊಳಚೆ ಪ್ರದೇಶಗಳಲ್ಲಿ ಇವರ ವಾಸ. ಶಿಕ್ಷಣದ ಕೊರತೆ, ಆರೋಗ್ಯದ ಸಮಸ್ಯೆ ಇವರಲ್ಲಿ ತಾಂಡವವಾಡುತ್ತದೆ ಎಂದರು.

ಅಧಿಕಾರ ವಿಕೇಂದ್ರೀಕರಣ, ಸಮೂಹ ನಾಯಕತ್ವದ ಕಲ್ಪನೆ ವಿಸ್ತಾರವಾದ– ಕಾರ್ಮಿಕ ಸಂಘಟನೆಯ–ವಲಯದಲ್ಲಿ ಸಂಘರ್ಷ ಹೂಡಿದ್ದ ಅನುಭವವನ್ನೂ, ಸರಸ್ವತಿ ಹಂಚಿಕೊಂಡರು. ಚಳವಳಿಗಳು ಆತ್ಮಗೌರವ ಕೊಡುತ್ತವೆ, ಅಸ್ತಿತ್ವದ ಅಸ್ಮಿತೆಯನ್ನು ಗುರುತಿಸುತ್ತವೆ. ಚಳವಳಿಗೂ ಮಿತಿಗಳಿವೆ. ಚಳವಳಿಯ ಮೂಲ ಆಶಯ ಮಾನವೀಯತೆ. ಈ ದಿಕ್ಕಿನತ್ತ ಸಾಗುವಾಗ ಚಳವಳಿಯನ್ನು ಮೀರಿದ ಏಕಾಂಗಿ ಪಯಣ ಅನಿವಾರ್ಯವಾಗುತ್ತದೆನ್ನುತ್ತಾ ಅವರ ಅನುಭವದ ಹಿನ್ನೆಲೆಯಲ್ಲಿ ತಾವೇ ರಚಿಸಿದ ಒಂದು ಉತ್ತಮ ಕತೆಯನ್ನು ಓದಿದ್ದು ಚಳವಳಿ ಎತ್ತುವ ಪ್ರಶ್ನೆಗಳು ಅಭಿವ್ಯಕ್ತಿಗೊಳ್ಳುವ ಬಗೆಯನ್ನು ಗುರುತಿಸಲು ಸಹಕಾರಿ ಯಾಯಿತು. ಈ ಗೋಷ್ಠಿಯ ನಿರ್ವಾಹಕರು ಚಂಪಾವತಿ.

೭ನೇ ತಾರೀಖು ಮಧ್ಯಾಹ್ನ **'ಕಾವ್ಯ, ಕಥನಸಾಹಿತ್ಯ ಮತ್ತು ವಿಮರ್ಶೆ:– ಮಹಿಳಾ ಅನುಭವ ಮತ್ತು ಅಭಿವ್ಯಕ್ತಿ'** ಗೋಷ್ಠಿಯಲ್ಲಿ ಕಥನ ಸಾಹಿತ್ಯ ಕುರಿತು ಮಾತನಾಡಿದ ಲೇಖಕಿ ಸವಿತಾ ನಾಗಭೂಷಣ್ "ಮನುಷ್ಯನ ಬಿಡುಗಡೆಯೇ ಕಥೆ" ಎಂದರು. ಮಹಿಳೆ ಎಂದರೇನೇ ಕಥೆ. ನಮ್ಮಲ್ಲಿ ಸಶಕ್ತ ಕಥೆಗಾರ್ತಿಯರಿದ್ದಾರೆ. ಇವರು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಆಯಾ ಕಾಲದ ಸವಾಲುಗಳನ್ನು ಎದುರಿಸಿದ ವಿವಿಧ ಸ್ತರದ ಮಹಿಳೆಯರು ವೈವಿಧ್ಯಮಯವಾದ ಸ್ತ್ರೀಯ ಚಿತ್ರಣವನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಆದಿ ಲೇಖಕಿಯರು, ಆಧುನಿಕ ಬರಹಗಾರ್ತಿಯರು, ಸ್ತ್ರೀವಾದಿ ಪ್ರಜ್ಞೆಯಿಂದ ಬರೆದ ಲೇಖಕಿಯರು, ಮುಸ್ಲಿಂ ಜಗತ್ತನ್ನು ಅನಾವರಣಗೊಳಿಸಿದ ಲೇಖಕಿಯರು ಹೀಗೆ ಒಂದು ವಿಶಾಲವಾದ ಮಹಿಳಾ ಜಗತ್ತೇ ನಮ್ಮ ಮುಂದಿದೆ ಎಂದು ಸವಿತಾರವರು ನುಡಿದರು.

ಸಂವಾದಕಾರರಾಗಿ ಮಾತನಾಡಿದ ಲೇಖಕಿ ಎಲ್.ಸಿ. ಸುಮಿತ್ರ ರವರು ಅಭಿವ್ಯಕ್ತಿ ಕುರಿತು ಮಾತನಾಡುತ್ತಾ, ಮರಾಠಿ ಲೇಖಕಿಯ ಮಾತನ್ನು ಉದ್ಧರಿಸಿದರು. ಬೆಲ್ಲ, ಸಕ್ಕರೆಯನ್ನು ಹೋಲಿಸಿ ಬೆಲ್ಲಕ್ಕಿರುವ ಪರಿಮಳ, ಬಣ್ಣ, ರುಚಿ ಸಕ್ಕರೆಯಾಗುವ ಹಂತದಲ್ಲಿ ಕಳೆದೇ ಹೋಗುತ್ತದೆ. ಹಾಗೆಯೇ ಲೇಖಕಿಯರ ಸಂವೇದನೆಯ ವೈಶಿಷ್ಟ್ಯಗಳು ಬರಹರೂಪದಲ್ಲಿ ಅಭಿವ್ಯಕ್ತಿಯಾದಾಗ ಎಲ್ಲೋ ಏನೋ ಕಳೆದು ಹೋಗಿರುತ್ತದೆ ಎಂಬುದು ೨೧ನೆಯ ಶತಮಾನದಲ್ಲೂ ವಾಸ್ತವ ಎಂದರು. ಕಲಾತ್ಮಕ, ಸಾಹಿತ್ಯಕ, politically correct, ಜೀವನಾನುಭವ, ಅಭಿವ್ಯಕ್ತಿ ಇವನ್ನೆಲ್ಲ ಮೀರಿ ಇಂದು ಕಥನ ಸಾಹಿತ್ಯ ಬೆಳೆದಿದೆ ಎಂದರು. ಹೊಸ ಪೀಳಿಗೆಯವರು ಬ್ಲಾಗ್‌ನಲ್ಲಿ ಬರೆಯುವುದನ್ನು ವಿವರಿಸಿದ ಇವರು ಚೇತನಾ ತೀರ್ಥಹಳ್ಳಿಯವರ ಬರಹವನ್ನು ಉದಾ ಹರಿಸಿದರು. ೧೫ ವರ್ಷಗಳ ಹಿಂದೆ ಪ್ರತಿಮೆ/ರೂಪಕ ಬಳಸಿ ಹೇಳುತ್ತಿದ್ದ ಸಂಗತಿಗಳನ್ನು ಇಂದು ನಿರ್ಭಿಡೆಯಿಂದ ಕಥನ ಸಾಹಿತ್ಯದಲ್ಲಿ ಹೇಳಲಾಗುತ್ತಿದೆ ಎಂದರು. ಕೃಷಿ ಕುರಿತು ಮಾತನಾಡುತ್ತಾ ಇಂದು ಹಳ್ಳಿಗಳು ಹಳ್ಳಿಗಳಾಗಿ ಉಳಿದಿಲ್ಲ ಎಂದರು. 'ಗುಬ್ಬಿ ಹೇಳುವ ಕಥೆ' 'ಕಲ್ಲಿನ ಕೋಳಿ' ಕಥೆಗಳಲ್ಲಿ ವ್ಯಕ್ತವಾಗಿರುವ ನಕ್ಸಲೈಟ್ ಸಮಸ್ಯೆ, ವೆನಿಲಾಬೆಳೆಯ ಕುರಿತು ಹೇಳುತ್ತಾ "ಸಂಕ್ರಮಣದ ಸ್ಥಿತಿಯಲ್ಲಿ ಕೃಷಿ ಇದೆ, ಇದರ ಒಡಲೊಳಗೆ ಸಾಮಾಜಿಕ, ಸಾಹಿತ್ಯ ಚಳವಳಿ ಇದೆ" ಎಂದರು.

ಸಂವಾದಕಾರರಾದ ಲೇಖಕಿ ಸವಿತಾ ಬನ್ನಾಡಿಯವರು ಅಭಿವ್ಯಕ್ತಿಯ ತೊಡಕುಗಳನ್ನು ಕುರಿತು ಮಾತನಾಡಿದರು. ಸಾಹಿತ್ಯದ ಅಪೇಕ್ಷೆಗಳು, ಲೇಖಕಿಯರ ಮೇಲಿನ ಒತ್ತಡಗಳನ್ನು ವಿವರಿಸಿದ ಇವರು ಯಾವ ವಿಮರ್ಶಕರು ನಮ್ಮನ್ನು ಗುರುತಿಸಬೇಕೆಂದು ಎದುರು ನೋಡುತ್ತೇವೆ ಎಂದು ಕೇಳಿದರು. 'ಸ್ತ್ರೀಲೋಕ' 'ಕಸೂತಿ' ಯಂತಹ ಕಾದಂಬರಿಗಳಲ್ಲಿ ಹೆಂಗಸಿನ ದೃಷ್ಟಿಕೋನ ರೂಪಿತವಾಗಿದೆ ಎಂದರು. ನಮ್ಮ ಸೃಜನಶೀಲತೆಯಲ್ಲಿಯೂ ಕಥನದಲ್ಲಿ ಕಾವ್ಯ, ಕಾವ್ಯದಲ್ಲಿ ಗದ್ಯದಂತಹ ಪ್ರಯೋಗಗಳು ಅಗತ್ಯ ಎಂದರು. ಉಜ್ವಲವಾದ ಸಾಹಿತ್ಯ



- ಈ ಕಾರ್ಯಕ್ರಮಕ್ಕೆ ಕಾರಣಕರ್ತರು ಕುವೆಂಪು ಪ್ರತಿಷ್ಠಾನದ ಸದಸ್ಯರಲ್ಲೊಬ್ಬರಾದ ಎಲ್. ಸಿ. ಸುಮಿತ್ರ 'ಕುವೆಂಪು ಪ್ರತಿಷ್ಠಾನ'ದಲ್ಲಿ ನೀವು ಒಂದು ಕಾರ್ಯಾಗಾರ ಅಥವಾ ಒಂದು ಸಭೆ ಮಾಡಿ, ಇಲ್ಲಿನ ವ್ಯವಸ್ಥೆ ನಾವು ನೋಡಿಕೊಳ್ಳುತ್ತೇವೆ ಎಂದು ಹುರಿದುಂಬಿಸಿದ ಲೇಖಕಿ ಎಲ್. ಸಿ. ಸುಮಿತ್ರರವರು ಸುಮಾರು ಒಂದು ತಿಂಗಳಿನವರೆಗೆ ದೂರವಾಣಿ ಸಂಪರ್ಕದಲ್ಲಿ ನಮ್ಮ ಜೊತೆಗಿದ್ದು ಇಡೀ ಕಾರ್ಯಾಗಾರ ನಡೆಸುವುದಕ್ಕೆ ಸಹಾಯಹಸ್ತ ಚಾಚಿದ್ದರು. 'ನಮ್ಮ ಮಾನಸ' ಈ ಸಹಕಾರವನ್ನು ನೆನೆಯುತ್ತದೆ.
- ಕುಪ್ಪಳಿಯ ಕಾರ್ಯಾಗಾರದ ವಸತಿ, ಊಟ ವ್ಯವಸ್ಥೆಯನ್ನು ನೋಡಿಕೊಂಡವರು ಕುವೆಂಪು ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ಕಡಿದಾಳ್ ಪ್ರಕಾಶ್‌ರವರು. ಮಲೆನಾಡಿನ ತಂಬುಳಿ, ಹಲಸಿನ ಹಣ್ಣಿನಿಂದ ಹಿಡಿದು ಇತರ ಖಾದ್ಯಗಳನ್ನು ಹೊತ್ತು ಹೊತ್ತಿಗೆ ಸರಬರಾಜು ಮಾಡಿಸಿದ್ದಲ್ಲದೇ ಕಾರ್ಯಾಗಾರ ನಡೆಸುವುದಕ್ಕೆ ಬೇಕಾದ ಧ್ವನಿವರ್ಧಕ ಮುಂತಾದ ವ್ಯವಸ್ಥೆಗಳನ್ನು ನಮ್ಮೊಂದಿಗಿದ್ದು ವ್ಯವಸ್ಥಿತವಾಗಿ ನೋಡಿಕೊಂಡರು. ಇವರ ಹೃದಯ ವೈಶಾಲ್ಯತೆಯನ್ನು ಕೂಡಾ 'ನಮ್ಮ ಮಾನಸ' ನೆನೆಯುತ್ತದೆ.
- ಕುವೆಂಪು ಪ್ರತಿಷ್ಠಾನದ ನೂತನ ಅಧ್ಯಕ್ಷರಾದ ಡಾ. ಹಂಪನಾ ಅವರು ಶುಭಕೋರಿ ಬೆಂಬಲಿಸಿದ್ದನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.
- 'ನಮ್ಮ ಮಾನಸ'ಕ್ಕೆ ಟೇಪ್‌ರೆಕಾರ್ಡರನ್ನು ಕೊಡುಗೆಯಾಗಿ ನೀಡಿದ ಬಿ. ಸುರೇಶ, ಹಲವು ಬಗೆಯಲ್ಲಿ ನೆರವು ನೀಡಿದ ಚಿಕ್ಕ ಸುರೇಶ, ಇಳಾ ಮುದ್ರಣದ ಗುರುಮೂರ್ತಿ, ಕುಪ್ಪಳಿಯ ಕವಿಶೈಲದಲ್ಲಿ ಕುವೆಂಪು ಪದ್ಯ ಓದಿ, ಹಾಗೆಯೇ ಇತರ ಎಲ್ಲಾ ಪ್ರದೇಶಗಳಲ್ಲೂ ಸುತ್ತಾಡಿಸಿ, ಸ್ಥಳದ ವರ್ಣನೆಯನ್ನು ಮಾಡಿ, ತಮ್ಮ ಕ್ಯಾಮರಾದಿಂದ ಕ್ಲಿಕ್ಕಿಸಿದ ಫೋಟೋಗಳನ್ನು ಕೊಟ್ಟು ಸದಾ ಜೊತೆಗಿದ್ದು ಸಹಕಾರ ನೀಡಿದ ಡಾ. ಶಿವಾರೆಡ್ಡಿಯವರನ್ನು 'ನಮ್ಮ ಮಾನಸ' ವಂದಿಸುತ್ತದೆ.
- ಪುಟ್ಟ ಬಾಲೆ ಪುಣ್ಯಕೋಟಿಯು ಕುವೆಂಪು ರಾಮಾಯಣವನ್ನು ಕಂಠಸ್ಥ ಮಾಡಿಕೊಂಡಿದ್ದಾಳೆ. ಮಂಥರೆ, ಊರ್ಮಿಳೆ ಮೊದಲಾದ ಹಲವು ಪ್ರಸಂಗಗಳನ್ನು ಅಳುಕು, ಅಂಜಿಕೆಗಳಿಲ್ಲದೇ ಸುಶ್ರಾವ್ಯ ಕಂಠದಿಂದ ಪಠಿಸಿ ಮಹಿಳೆಯರ ಮೆಚ್ಚುಗೆ ಗಳಿಸಿದಳು.
- ಕುಪ್ಪಳಿಯ ಕಾರ್ಯಾಗಾರಕ್ಕೆ ಸುಮಾರು ೭೦,೦೦೦ ರೂ.ಗಳನ್ನು ಖರ್ಚು ಮಾಡಿದ್ದೇವೆ. ಸಹಯೋಗ ನೀಡಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ೩೦,೦೦೦ ರೂಗಳ ನೆರವನ್ನು ನೀಡುವುದಾಗಿ ಹೇಳಿದೆ. ವಂದನೆಗಳು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಾಗೂ ಅಧಿಕಾರಿಗಳಾದ ಐ. ಎಂ. ವಿಠಲಮೂರ್ತಿ ಅವರು, ಮನುಬಳಿಗಾರ್ ಅವರನ್ನು 'ನಮ್ಮ ಮಾನಸ' ಕೃತಜ್ಞತೆಯಿಂದ ನೆನೆಯುತ್ತದೆ.

ಕಥನ ಮೂಡಿ ಬರಲು ಚಿಂತನೆ, ರಾಜಕೀಯ ಒಳನೋಟ, ಚಳವಳಿಯ ಜೊತೆ ಸಂಬಂಧ ಇದ್ದಾಗ ಮಾತ್ರ ಸಾಧ್ಯವಾಗುತ್ತದೆ ಎಂದ ಇವರು ಆಂತರಿಕ ಜಿಜ್ಞಾಸೆ, ಸಂಘರ್ಷಗಳಿಂದ ಮಥಿಸಿ ಮಥಿಸಿ ಸಾಹಿತ್ಯ ಕಥನ ಹುಟ್ಟುವ ಅಗತ್ಯವಿದೆ ಎಂದರು. ಸಿದ್ಧ ಉಡುಪು ಕಾರ್ಮಿಕ ಮಹಿಳೆ ಯಮುನಾ ಅವರ ಸಂಕಥನ ಸವಿತಾ ಬನ್ನಾಡಿ ಅವರ ಹೊಸ ಕವಿತೆಗೆ ಸ್ಫೂರ್ತಿಯಾಗಿದ್ದು ವಿಶೇಷ.

ಇದೇ ಗೋಷ್ಠಿಯಲ್ಲಿ ಕಾವ್ಯವನ್ನು ಕುರಿತು ಮಾತನಾಡಿದ ಸ. ಉಷಾರವರು ಪ್ರಾದೇಶಿಕ ಸಂಸ್ಕೃತಿ ಎದುರಿಸುತ್ತಿರುವ ಅಪಾಯಗಳನ್ನು ಕುರಿತು ಮಾತನಾಡಿದರು. ಊಳಿಗಮಾನ್ಯ ಪದ್ಧತಿ ಹಾಗೂ ಪಿತೃ ಪ್ರಧಾನ ಪದ್ಧತಿಗಳು ಮೂರನೆಯ ಜಾಗತೀಕರಣವೆಂಬ ಅತಿ ನಯಗಾರಿಕೆಯ ವ್ಯವಸ್ಥೆಯೊಡನೆ ಮಿಳಿತವಾಗಿವೆ ಮತ್ತು ಸೃಜನಶೀಲತೆಯನ್ನು ತನ್ನ ಪಂಜದಲ್ಲಿ ಹಿಡಿದಿವೆ ಎಂದರು. ಆಧುನಿಕ ಮಹಿಳಾ ಕಾವ್ಯ ಹೋರಾಟದ ಪ್ರಜ್ಞೆಯೊಂದಿಗೆ ಸಾಂಪ್ರದಾಯಿಕ ಮೌಲ್ಯ ಧಿಕ್ಕರಿಸಿ ಪುರಾಣವನ್ನು ಕ್ರಾಂತಿಕಾರಿ ಧೋರಣೆಯಿಂದ ಪುನಾರಚಿಸಿದೆ ಎಂದರು. ಸ್ಥಾಪಿತ ಮೌಲ್ಯಗಳ ವಿರುದ್ಧ ಹೋರಾಟ ೮೦, ೯೦ರ ದಶಕದ ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿದೆ ಎಂದರು. ಪುರುಷನನ್ನು ಗೆಳೆಯನೆಂದು ಭಾವಿಸಿ ತಿದ್ದುವ ಪ್ರಯತ್ನಗಳು ಕಾವ್ಯದಲ್ಲಿ ಕಂಡುಬಂದಿವೆ ಎಂದರು. ಸರಸ್ವತಿ ಚಿಮ್ಮಲಗಿ, ಬಾನುಮುಷ್ತಾಕ್, ಆರ್. ನಿರ್ಮಲ, ಕವಿತಾ ರೈ, ಪ್ರತಿಭಾ ನಂದಕುಮಾರ್, ಕೆ. ಷರೀಫಾ ಮುಂತಾದವರ ಕವನದ ಸಾಲುಗಳನ್ನು ಉದ್ಧರಿಸಿದ ಇವರು ಹಾಸ್ಯ ವಿಡಂಬನೆ, ಬಂಡಾಯ ಛೇಡಿಸುವಿಕೆಯ ವಿವಿಧ ಸ್ತರಗಳಲ್ಲಿ ಮಹಿಳಾ ಅಸ್ಮಿತೆಯನ್ನು ದಾಖಲು ಮಾಡಿರುವುದನ್ನು ಗುರುತಿಸಿದರು. ಮಹಿಳಾ ಕಾವ್ಯ ವೈಯಕ್ತಿಕತೆಯನ್ನು ಕುರಿತು ಹಾಡುತ್ತಲೇ ಸಮಾಜಮುಖಿಯಾಗಿದೆ ಎನ್ನುತ್ತಾ, ಸ. ಉಷಾ. ಹೊಸ ತಲೆಮಾರಿನ ಕವಯಿತ್ರಿಯರಾದ ತಾರಿಣಿ ಶುಭದಾಯಿನಿ, ಹಾ.ಮ. ಕನಕ, ಸ್ವಯಂಪ್ರಭೆ, ಡಾ. ವಿನಯ ಇವರ ಕೊಡುಗೆಯನ್ನು ಸ್ಮರಿಸಿದರು. ಮಹಿಳಾ ಕಾವ್ಯ ಜಾಗತೀಕರಣದ ಹುನ್ನಾರಗಳ ವಿರುದ್ಧ ಧ್ವನಿ ಎತ್ತಿರುವುದನ್ನು ಸಹ ಉಷಾ ತಮ್ಮ ಪ್ರಬಂಧದಲ್ಲಿ ಗುರುತಿಸಿದರು. ಹಾಗೆಯೇ ಕೃಷಿ ಮಹಿಳೆ ಶಿವಮ್ಮನವರ ಬೀಜದ ಗುಟ್ಟಿನ ಅನುಭವ ಕಥನ ಕೇಳಿದ ಇವರು ಆ ಸ್ಫೂರ್ತಿಯಿಂದ ರಚಿಸಿದ ಕವನವನ್ನು ಓದಿದರು.



**ಮಮತಾ ಜಿ. ಸಾಗರ, ಪುಷ್ಪಮಾಲಾ ಪ್ರಾತ್ಯಕ್ಷಿಕೆಯಲ್ಲಿ**

ಸಾಹಿತ್ಯ ವಿಮರ್ಶೆಯ ಬಗ್ಗೆ ಮಾತನಾಡಿದ ಲೇಖಕಿ ವಿಮರ್ಶಕಿ ಪ್ರೀತಿ ಶುಭಚಂದ್ರ ವಸಾಹತೋತ್ತರ ಸಂದರ್ಭದಲ್ಲಿ ವಿಮರ್ಶೆ ಎದುರಿಸುತ್ತಿರುವ ಸವಾಲುಗಳನ್ನು ವಿವರಿಸಿದರು. ವಾಸ್ತವವಾದೀ ಚಿತ್ರಣಕ್ಕೆ ಆನಂದರ 'ನಾನು ಕೊಂದ ಹುಡುಗಿ' ಉದಾಹರಿಸಿದ ಇವರು ವಸ್ತು ಚಿತ್ರಣದಲ್ಲಿ ಮಹಿಳೆಯರ ಬದುಕನ್ನು ಲೇಖಕರು ಹಿಡಿದರೆ, ತ್ರಿವೇಣಿ ಯಾಕೆ ಹೀಗೆ ಎಂಬ ಪ್ರಶ್ನೆ ಎತ್ತುತ್ತಾರೆ ಎಂದರು. ತಾರಕೇಶ್ವರರಂತಹ ವಿಮರ್ಶಕರು ಸ್ತ್ರೀಲೋಕ, ಲೇಖ–ಲೋಕ ಕೃತಿಗಳನ್ನು ಕೇಂದ್ರವಾಗಿಟ್ಟುಕೊಂಡು ಈ ಬರಹಗಳ ಹಿಂದೆ ರಾಜಕಾರಣ ಇದೆ ಎನ್ನುತ್ತಾರೆ. ಈ ರಾಜಕಾರಣ ಲಾಭದಾಯಕ, ಆದರೆ ಇವು ಸಾರ್ವಕಾಲಿಕಕ್ಕೆ ನಿಲ್ಲಬಲ್ಲಂತಹ ಶ್ರೇಷ್ಠ ಕೃತಿಗಳಲ್ಲದ ಕಾರಣ ವಿಶಿಷ್ಟ ಎಂದು ಕೃತಕ ಮಾನ್ಯತೆ ಪಡೆದುಕೊಳ್ಳುತ್ತವೆ ಎಂದು ತಾರಕೇಶ್ವರ ಬರೆಯುತ್ತಾರೆ. ಈ ತರಹದ ವಿಮರ್ಶೆ ದಿಕ್ಕು ತಪ್ಪಿಸುತ್ತದೆ ಎಂದು ಪ್ರೀತಿ ಶುಭಚಂದ್ರ ನುಡಿಯುತ್ತಾರೆ. ದೇಶೀಯ ಪರಂಪರೆಯನ್ನು ಎತ್ತಿ ಹಿಡಿಯುವ ಹಿನ್ನೆಲೆಯಲ್ಲಿ ಸ್ತ್ರೀವಾದಿ ಚಿಂತನೆಗಳು ದೇಶೀಯತೆಯನ್ನು ನಾಶಮಾಡುತ್ತವೆ ಎಂದು ವಸಾಹತೋತ್ತರ ವಿಮರ್ಶೆಗಳು ಹೇಳುತ್ತಿವೆ. ಆಶೀಶ್ ನಂದಿಯವರೂ ಕೂಡಾ ಚಾರಿತ್ರಿಕ ಕಾರಣ ಹುಡುಕದೇ ಸರಳೀಕೃತ ವಾದದಲ್ಲಿ ರಾಜಾರಾಂ ಮೋಹನರಾಯ್

ರವರನ್ನು ವಿಮರ್ಶಿಸಿದ ರೀತಿಯನ್ನು ವಿವರಿಸಿದ ಪ್ರೀತಿಶುಭಚಂದ್ರ ಸ್ತ್ರೀವಾದಿ ಚಿಂತನೆಗಳು ತಾರಕೇಶ್ವರ ಹಾಗೂ ಆಶೀಶ್ ನಂದಿಯವರಂತಹ ವಿಮರ್ಶಕರನ್ನು ಕುರಿತು ಚರ್ಚೆ ನಡೆಸುವ ಅಗತ್ಯವಿದೆ ಎಂದರು.

ಸಂವಾದಕಾರರಾದ ಚಂದ್ರಮತಿ ಸೋಂದಾರವರು ದಲಿತರನ್ನು, ಬುಡಕಟ್ಟು ಜನರನ್ನು ಸಾಹಿತ್ಯ ಮುಟ್ಟುತ್ತಿಲ್ಲ. ಪುರುಷ ಮಾದರಿಗಳನ್ನು, ಅವರ ಕಲಾತ್ಮಕತೆಯ ಅಳತೆಗೋಲನ್ನು ಮಹಿಳೆಯರೇಕೆ ಒಪ್ಪಬೇಕು ಎಂದರು. ಸಮಾಜ ನಿರ್ಮಿತ ಗೋಡೆಯನ್ನು ಮೀರಿ ಸಾಹಿತ್ಯ ಬೆಳೆಯುತ್ತಿರುವಾಗ ಕಾತ್ಯಾಯಿನಿ, ಗಾರ್ಗಿ ಮಾದರಿಗಳೇ ಆಗಬೇಕಿಲ್ಲ ಎಂದು ಕೂಡಾ ಚಂದ್ರಮತಿಯವರು ಪ್ರತಿಕ್ರಿಯಿಸಿದರು. ಈ ಗೋಷ್ಠಿಯ ನಿರ್ವಾಹಕರು ಡಾ. ಬಿ.ಎನ್. ಸುಮಿತ್ರಾಬಾಯಿ ಅವರು.


ಸುನಂದಾ ಜಯರಾಂ

೮.೬.೨೦೦೮ರಂದು ನಡೆದ ಮೊದಲನೇ ಗೋಷ್ಠಿ **'ರಂಗಭೂಮಿ, ಚಿತ್ರಕಲೆ: ಮಹಿಳಾನುಭವ, ಅಭಿವ್ಯಕ್ತಿ'** ರಂಗಭೂಮಿಯ ಬಗ್ಗೆ ಮಾತನಾಡಿದ ರಂಗ ನಿರ್ದೇಶಕಿ ಎಸ್. ಮಾಲತಿಯವರು ೧೯ನೆಯ ಶತಮಾನದ ಉತ್ತರಾರ್ಧದಿಂದ ಈಗಿನ ನಾಟಕಕಾರ ಚಂದ್ರಶೇಖರ ಕಂಬಾರರವರೆಗಿನ ನಾಟಕದ ಚರಿತ್ರೆಯ ಸ್ತ್ರೀ ಚಿತ್ರಣವನ್ನು ಸ್ತ್ರೀಪರ ದೃಷ್ಟಿಕೋನದಿಂದ ವಿಶ್ಲೇಷಿಸಿದರು. ಕನ್ನಡದಲ್ಲಿ ರಚಿತವಾದ ಮೊದಲ ನಾಟಕ 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ಹಾಗೂ ಇದೇ ಸಂದರ್ಭದ 'ಆರು ಬೆರಳಿನ ಕುರುಹು' ನಾಟಕಗಳು ಕನ್ಯಾಶುಲ್ಕ, ವಿಧವಾ ವಿವಾಹ, ವಿಷಮ ವಿವಾಹ, ಬಾಲ ವೈಧವ್ಯ ಕುರಿತು ಸುಧಾರಣಾವಾದಿ ಚಳವಳಿಯಿಂದ ಪ್ರೇರಿತವಾಗಿದ್ದರೂ, ಮಹಿಳೆ, ಪುರುಷರು ಸಮಾನರು ಎಂಬ ಅಂಶ ಇರಲಿಲ್ಲ. ಸಂಸರ ನಾಟಕ ಹೆಚ್ಚು ಐತಿಹಾಸಿಕವಾಗಿದ್ದು ಅಲ್ಲಿನ ಹೆಣ್ಣು ಸ್ವಾಭಿಮಾನ ಹಾಗೂ ಕ್ಷಾತ್ರತೇಜಸ್ಸನ್ನು ಹೊಂದಿದವರಾಗಿದ್ದಾರೆ. ಕೈಲಾಸಂ ನಾಟಕದಲ್ಲಿನ ವಿಧವೆಯರು, ತಾಯಂದಿರು ಗಟ್ಟಿಗಿತ್ತಿಯರು. ಇವರ ಸ್ತ್ರೀ ಪಾತ್ರದಲ್ಲಿ ವೈವಿಧ್ಯ ಇದೆ. ಸ್ತ್ರೀಯರಿಗೆ ನಾಟಕದಲ್ಲಿ ಪ್ರವೇಶ ನೀಡುವಂತಹ ಒಂದು ಕ್ರಾಂತಿಕಾರಕ ಹೆಜ್ಜೆಯನ್ನು ಕೈಲಾಸಂ ತೆಗೆದುಕೊಂಡದ್ದು ಚಾರಿತ್ರಿಕ ಸಂಗತಿಯಾಗುತ್ತದೆ. ಉದಾರವಾದಿ ನೀತಿಯ ಅ. ನ. ಕೃ ಹಾಗೂ ಮಾಸ್ತಿಯವರ ನಾಟಕಗಳಲ್ಲಿನ ಸ್ತ್ರೀಯರು ಸಾಮಾಜಿಕ ದೃಷ್ಟಿ, ಮೌಲ್ಯ ಕೆದಕುತ್ತಾರೆ. ಶ್ರೀರಂಗರ ನಾಟಕಗಳು ಸ್ತ್ರೀ ಪರವಾಗಿರುವುದು ವೈಚಾರಿಕ ನೆಲೆಯಲ್ಲಿ ತಟ್ಟುತ್ತದೆಯೆ ಹೊರತು ಭಾವನಾತ್ಮಕವಾಗಿ ಅಲ್ಲ ಎಂದರು. ಗಿರೀಶ್ ಕಾರ್ನಾಡ್‌ರವರು ಪುರಾಣ ಪ್ರತಿಮೆಗಳಿಂದ ಸ್ತ್ರೀಪರ ನಾಟಕಗಳನ್ನು ರಚಿಸಿದರೂ ವಾಸ್ತವ ಬದುಕಿನ ಆಧುನಿಕ ಸ್ತ್ರೀಯ ಚಿತ್ರಣ ಸಿಗುವುದಿಲ್ಲ. ಆಧುನಿಕ ಹೆಣ್ಣಿನ ಸಂಘರ್ಷವನ್ನು ಲಂಕೇಶರ ನಾಟಕಗಳಲ್ಲಿ ಕಾಣಬಹುದು. ಚಂದ್ರಶೇಖರ ಕಂಬಾರರ ನಾಟಕಗಳಲ್ಲಿ ಹೆಣ್ಣು ಕಾಮದ ವಸ್ತುವಾಗಿ ಕಂಡಿದ್ದರೂ ಜೋಕುಮಾರ ಸ್ವಾಮಿಯಂತಹ ನಾಟಕಗಳು ಸೂಕ್ಷ್ಮನೆಲೆಯಲ್ಲಿ ಸ್ತ್ರೀಪರ ಕಾಳಜಿಯನ್ನು ಧ್ವನಿಸುತ್ತವೆ ಎಂದರು.


ವರಲಕ್ಷ್ಮಿ


ತಸ್ನೀಂತಾಜ್

ಅನಂತರ ಸಂವಾದಕಾರರಾಗಿ ಮಾತನಾಡಿದವರು ಅಭಿನೇತ್ರಿ ಉಷಾ ಭಂಡಾರಿ. ಭದ್ರತೆಗಾಗಿ ೧೬೬೦ರಲ್ಲಿ ಕಲಾಪೋಷಕರ ಸಹಾಯದ ಅಗತ್ಯ ಇದ್ದಂತೆ ಈಗಲೂ ಅಗತ್ಯವಿದೆ. ಬದಲಾವಣೆ ಆಗಿಲ್ಲ ಎಂದರು. ವಿದ್ಯಾವಂತ ಮಹಿಳೆಯರು ರಂಗಪ್ರವೇಶ ಮಾಡತೊಡಗಿದಾಗಿನಿಂದ ಒಂದು ರೀತಿಯ ಘನತೆ ರಂಗನಟಿಯರಿಗೆ ಸಿಕ್ಕಿದೆ. ನಾಟಕಗಳನ್ನು ಬಹುತೇಕ ಗಂಡಸರೇ ಬರೆಯುತ್ತಾರಾದ್ದರಿಂದ ಗಟ್ಟಿಯಾದ ಹೆಣ್ಣು ಪಾತ್ರಗಳು ರಚಿತವಾಗಿಲ್ಲ ಎಂದರು. ಹೆಣ್ಣುಮಕ್ಕಳು ನಾಟಕ ಬರೆಯದೇ ಇರುವುದು, ರಂಗಚಳವಳಿ ಬೆಳೆಯದೇ ಇರುವುದರಿಂದ 'ಹೆಣ್ಣು ಕೇಂದ್ರಿತ' ನಾಟಕಗಳಿದ್ದರೂ ಅವುಗಳ ಅಂತಃಸತ್ವದಲ್ಲಿ ಗಟ್ಟಿತನವಿರುವುದಿಲ್ಲ ಎಂದರು. ರಂಗಭೂಮಿಯಲ್ಲಿಯ ಘರ್ಷಣೆಗಳನ್ನು ಕೂಡಾ ಸ್ವಾನುಭವದ ಹಿನ್ನೆಲೆಯಲ್ಲಿ ಇವರು ಹಂಚಿಕೊಂಡರು. ಕವಯಿತ್ರಿ ಮಮತಾ ಜಿ. ಸಾಗರ್ ಇತ್ತೀಚೆಗೆ ಪ್ರದರ್ಶನಗೊಂಡ 'ದಿ ಸೂಟ್' ಹಾಗೂ 'ಪಿರಮಿಡ್ಸ್' ನಾಟಕಗಳ ಬಗ್ಗೆ ವಿವರಿಸಿದರು. ಚರ್ಚೆಯಲ್ಲಿ ದೇಹದ inhibitions ಬಗ್ಗೆ, ಹೆಣ್ಣಿನ ಮನಸ್ಸು, ನಟಿಯರಿಗೆ ಎದುರಾಗುವ ಸವಾಲುಗಳು, ಸೌಂದರ್ಯ ಕುರಿತ ಹುಸಿ ನಂಬಿಕೆಗಳು, ಏಕವ್ಯಕ್ತಿ ಪ್ರಸ್ತುತಿ ಮುಂತಾದವುಗಳ ಬಗ್ಗೆ ಗಮನ ಹರಿಸಲಾಯಿತು.


ಉಷಾ ಭಂಡಾರಿ


ಶೈಲಜಾನಾಗ್

ಇದೇ ಗೋಷ್ಠಿಯಲ್ಲಿ ಚಿತ್ರಕಲಾವಿದೆ ಪುಷ್ಪಮಾಲಾರವರು ತಾವೇ ಅಭಿನಯಿಸಿ, ನಿರ್ದೇಶಿಸಿದ ಎರಡು ಪ್ರಾಯೋಗಿಕ ಚಿಕ್ಕ ಸಿನೆಮಾಗಳನ್ನು ತೋರಿಸಿದರು. ರಾಷ್ಟ್ರವನ್ನು ಹೆಣ್ಣಿನ ಮೂಲಕ ನೋಡುವುದು ತಮ್ಮ ಆಶಯವಾಗಿತ್ತು ಎಂದು ಅವರು ನುಡಿದರು. ಭಾರತದ ಆಧುನಿಕತೆಯಲ್ಲಿ ಪಟ್ಟಿಗಳನ್ನು ಮಾಡುವುದು, ಎಲ್ಲದನ್ನೂ ಒಂದು orderನಲ್ಲಿ ಇಡುವುದು ಕಾಣಿಸುತ್ತದೆ. ಅದನ್ನು ಕಪ್ಪು ಹಲಗೆಯನ್ನು ಮಧ್ಯದಲ್ಲಿ ಬಳಸಿ, ಮಿಲಿಟರಿಯ ಗಂಡ ಮಾಡುವ ಪಟ್ಟಿಗಳು, ಹೆಂಡತಿ ಮಾಡುವ ಆಹಾರಪದಾರ್ಥಗಳ ಪಟ್ಟಿ, ಮಧ್ಯ ಮಧ್ಯದಲ್ಲಿ ಮಗ ಮಾಡುವ ಡ್ರಾಯಿಂಗ್‌ಗಳನ್ನೂ ಒಂದಕ್ಕೊಂದು ಎದುರು ಮಾಡಿ ಭಾರತದ ಆಧುನಿಕತೆಯ ಚಿತ್ರಣವನ್ನು ಕಟ್ಟಿಕೊಡುತ್ತಾರೆ. (ಚಿತ್ರ 'ರಾಷ್ಟ್ರೀಯ ಖೀರ್ ದೇಸೀ ಸಲಾಡ್'). ೧೯೨೦ರ ರಷ್ಯನ್ ಸಿನೆಮ ನಿರ್ದೇಶಕ ಐನ್‌ಸ್ಟೈನ್‌ನ ಮಾಂಟಾಜ್ ಥಿಯರಿಯನ್ನು ತಾವು ಬಳಸಿದುದಾಗಿ ಪುಷ್ಪಮಾಲಾ ನುಡಿಯುತ್ತಾರೆ. ತಾವು ವಿಭಿನ್ನ ರೀತಿಯ ಸಂಗೀತ ಬಳಸುವ ಮೂಲಕ ಸ್ಥಾಪಿತ ಪುರುಷ ಮೌಲ್ಯಗಳಾಗಿದ್ದ ಶಬ್ದದ, ಸಂಗೀತದ ಪ್ರಭಾವವನ್ನು ಮುರಿಯುವುದನ್ನೂ ವಿವರಿಸಿದರು.


ನಿರ್ಮಲ

ಎರಡನೆಯ ಸಿನೆಮಾ 'ಪ್ಯಾರಿಸ್ ಆಟಂ' ವರ್ಣಭೇದ ನೀತಿಯನ್ನು ಕುರಿತದ್ದು. ೧೬ನೆಯ ಶತಮಾನದಲ್ಲಿ ಪ್ರಾಟಿಸ್ಟೆಂಟ್ಸ್ ಹಾಗೂ ಕೆಥೋಲಿಕ್ಸ್ ಮಧ್ಯೆ ನಡೆದ ೩೦ ವರ್ಷದ ಯುದ್ಧದಲ್ಲಿ ಹಿಂಸೆ ಇತ್ತು. ಈ ಚರಿತ್ರೆಯನ್ನು ಪುಷ್ಪಮಾಲಾ ಅವರು ಇತ್ತೀಚೆಗೆ ಫ್ರಾನ್ಸ್‌ನಲ್ಲಿ ನಡೆದ ಗಲಭೆಯ ಜೊತೆಗಿಟ್ಟು ಐತಿಹಾಸಿಕ ನೋಟವಾಗಿ ನೋಡುತ್ತಾರೆ. ಗುಜರಾತ್ ಹಿಂಸೆ, ಸಿಖ್ ಗಲಭೆಯ ಚರಿತ್ರೆಯನ್ನು ಹೊಂದಿರುವ ನಮಗೆ ಫ್ರಾನ್ಸ್‌ನಲ್ಲಿ ನಡೆದ ಹಿಂಸೆಗೆ ಪ್ರತಿಕ್ರಿಯಿಸುವುದು ಸಾಧ್ಯವಾಗಿತ್ತು ಎಂದೂ ಪುಷ್ಪಮಾಲಾ ನುಡಿಯುತ್ತಾರೆ. ಚಿತ್ರಕಲೆಯಂಥ ದೃಶ್ಯ ಮಾಧ್ಯಮದ ಬಗ್ಗೆ ಅಕ್ಷರಬಲ್ಲ ಮಹಿಳೆಯರಿಗೂ ಇನ್ನೂ ಅರಿವಿರದ ಕಾರಣ ಈ ಬಗ್ಗೆ ಹೆಚ್ಚು ಚರ್ಚೆ ನಡೆಯಲಿಲ್ಲ. ಈ ಗೋಷ್ಠಿಯ ನಿರ್ವಾಹಕರು ಮಮತಾ ಜಿ. ಸಾಗರ.


ಪುಣ್ಯಕೋಟಿ

- ಜಾಗತೀಕರಣದ ಹಿನ್ನೆಲೆಯಲ್ಲಿ 'Integrated child development scheme' ಯೋಜನೆಯನ್ನು ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳೆರಡೂ ಮುಚ್ಚಬೇಕು ಅಂತ ಯೋಚನೆ ಮಾಡುತ್ತಿವೆ. ಇದನ್ನು ಖಾಸಗೀಕರಣ ಗೊಳಿಸುವ ಯತ್ನ ನಡೆಯುತ್ತಿದೆ. ಇದನ್ನೆಲ್ಲ ಅಂಗನವಾಡಿ ಕೆಲಸಗಾರರು ಮಾತ್ರ ಪ್ರಶ್ನಿಸಬೇಕೆ? **–ವರಲಕ್ಷ್ಮಿ**, ಕಾರ್ಮಿಕ ಸಂಘಟನೆ

- ಉಜ್ವಲ ಕಥನ ಸಾಹಿತ್ಯ ಮುಂದೆ ಬರಲು ಚಿಂತನೆ, ರಾಜಕೀಯ ಒಳನೋಟ, ಚಳವಳಿಯ ಸಂಬಂಧ ಇದ್ದಾಗ ಮಾತ್ರ ಸಾಧ್ಯ. ನಮ್ಮ ಸೃಜನಶೀಲತೆಯು ಬುಟ್ಟಿಯೊಳಗಿರುವ ಬುಸುಗುಡುವ ಹಾವು. ಆದರೆ ಬುಟ್ಟಿಯಿಂದ ಈಚೆ ತೆಗೆದಾಗ ಯಾವುದೋ ಮಾಯದಲ್ಲಿ ಹೂವಾಗಿರುತ್ತದೆ. ನಮ್ಮ ಅಭಿವ್ಯಕ್ತಿ ಹೂವಾಗಬಾರದು ಹಾವಿನ ರೋಷ, ಅದರ ರುದ್ರ ಸೌಂದರ್ಯ ಮಿಳಿತಗೊಂಡ ನಮ್ಮ ಅಭಿವ್ಯಕ್ತಿ ಇಂದು ಸಾಹಿತ್ಯದಲ್ಲಿ ಕಾಣಿಸಿಕೊಳ್ಳಬೇಕಾಗಿದೆ. **– ಸವಿತಾ ಬನ್ನಾಡಿ**, ಲೇಖಕಿ

- ಅವಳು ಅಡುಗೆ ಮನೆಯ ಹುಡುಗಿಯೂ ಹೌದು; ನೋಡಬಾರದು ಬೇಲಿಯೊಳಗನು ಎಂದು ಅಧಿಕ ಪ್ರಸಂಗಿ ಪುರುಷನನ್ನು ಎಚ್ಚರಿಸುವ ಏಕಾಂತ ಪ್ರಿಯೆಯೂ ಹೌದು. ಅವಳ ಗಾಜು ಕೊಳದಲ್ಲಿಯೂ ಬುದ್ಧ ಬೆಳಕು ಇದೆ. ಅವಳದಾದ ಕೋಣೆ ಅವಳ ಅಡುಗೆ ಮನೆಯಲ್ಲಿಯೇ ಇದೆ. **–ಸ. ಉಷಾ**. ಲೇಖಕಿ.

- ಮಹಿಳೆಯ ಶ್ರಮವನ್ನು ಗುರುತಿಸುವುದು ಅಸ್ತಿತ್ವದ ಪ್ರಶ್ನೆ. ಮಹಿಳೆಯ ಶ್ರಮವನ್ನು ಚಳವಳಿ ಗುರುತಿಸಬೇಕು. **– ಸುನಂದಾ ಜಯರಾಂ**, ರೈತ ಚಳವಳಿ.

- ಚುಕ್ಕಿ, ಸುನಂದ, ಅನಸೂಯಮ್ಮ ನಂತಹವರು ಒಟ್ಟಾಗಿ ರೈತ ಚಳವಳಿಯ ನಾಯಕತ್ವ ವಹಿಸಿದರೆ ರೈತ ಚಳವಳಿ ಅರ್ಥಪೂರ್ಣವಾಗಿ ಬೆಳೆಯ ಬಹುದೇನೋ. **– ಸವಿತಾ ನಾಗಭೂಷಣ್**, ಲೇಖಕಿ

- ನಿಜವಾದ ಹಿಂದೂಧರ್ಮವನ್ನು ಪ್ರೀತಿಸುವವನ ಹೃದಯದಲ್ಲಿ ಮುಸ್ಲಿಂ ಇರುತ್ತಾನೆ; ನಿಜವಾದ ಮುಸ್ಲಿಂ ಧರ್ಮವನ್ನು ಪ್ರೀತಿಸುವವನ ಹೃದಯದಲ್ಲಿ ಹಿಂದೂ ಇರುತ್ತಾನೆ. **– ತಸ್ನೀಮ್ ತಾಜ್**, ಲೇಖಕಿ.

- 'ಕತ್ತು ಹಿಡಿದು ಆಚೆ ತಳ್ಳು ಈ ಗೂಬೇನ' ಭದ್ರತಾ ಸಿಬ್ಬಂದಿಯ ಹತ್ತಿರ ಈ ಮಾತು ಹೇಳಿದ್ದ ಮಾಲೀಕ. ಮಗುವಿಗೆ ಹಾಲು ಕುಡಿಸೋದನ್ನೂ ಬಿಟ್ಟು ಇವರ ಫ್ಯಾಕ್ಟರಿಗೆ ಅಣು ಅಣುವಾಗಿ ದುಡಿದು ಅಷ್ಟು ದೊಡ್ಡಕ್ಕೆ ಬೆಳೆಸಿದೀವಿ, ಅದೂ ನಿನ್ನ ಹಣದಿಂದ ಅಲ್ಲ, ನಮ್ಮ ಶ್ರಮದಿಂದ. ನೀನು ನೆಮ್ಮದಿಯಿಂದ ಕೆಲಸ ಮಾಡೋಕೊ ಬಿಡೋದಿಲ್ವಲ್ಲ! **– ಯಮುನ**, ಸಿದ್ಧ ಉಡುಪು ಕಾರ್ಖಾನೆಯ ಕಾರ್ಮಿಕಳು

- ಅಭಿವ್ಯಕ್ತಿಯಲ್ಲಿ ಅನುಭವಕ್ಕೆ ನಿಷ್ಠಳಾಗಿರಬೇಕಾ? ಅಥವಾ ಕಲಾಕೃತಿಯಾಗಿಸ ಬೇಕಾ? ಅನುಭವದ ಪ್ರಾಮಾಣಿಕತೆಗೆ ಕಲ್ಪನೆಯ ಉಪ್ಪು ಖಾರ ಹಚ್ಚುವುದರ ಬಗ್ಗೆ ನನ್ಗೆ ಯಾವಾಗ್ಲೂ ಸಂಘರ್ಷ ಇರುತ್ತೆ. ಆದ್ರೆ ಅನುಭವದ ಪ್ರಾಮಾಣಿಕತೆ ಹಾಗೂ ಕಲಾಕೃತಿಯಾಗಿಸುವ ಮಧ್ಯದ ದಾರೀನ ನಾನು ಕಂಡುಕೊಳ್ಳ ಬೇಕಾಗಿದೆ. **– ದು. ಸರಸ್ವತಿ**, ಲೇಖಕಿ.

- ಖಾಸಗಿ ವಾಹಿನಿಯೊಂದರಲ್ಲಿ hidden cameraವನ್ನು ಕಲಾವಿದೆಯರು ಉಡುಪು ಬದಲಿಸುವ ಸ್ಥಳ ಹಾಗೂ ಶೌಚಾಲಯದಲ್ಲಿ ಇಟ್ಟು ಅನಂತರ ಅವರನ್ನು ಬ್ಲಾಕ್‌ಮೇಲ್ ಮಾಡಲಾಗುತ್ತಿತ್ತು ಎಂಬ ಅಂಶ ಮಹಿಳೆಯರನ್ನು ಹೇಗೆಲ್ಲಾ ಶೋಷಿಸಲಾಗುತ್ತದೆ ಎಂಬುದನ್ನು ತೋರಿಸುತ್ತದೆ **– ಶೈಲಜಾ ನಾಗ್**, ಚಲನಚಿತ್ರ, ಧಾರವಾಹಿ ನಿರ್ಮಾಪಕಿ

೮.೬.೨೦೦೮ರ ಮಧ್ಯಾಹ್ನ ನಡೆದ ನಾಲ್ಕನೆಯ ಗೋಷ್ಠಿ **'ಕೋಮುವಾದ, ಹಿಂಸೆ : ಮಹಿಳಾನುಭವ ಮತ್ತು ಅಭಿವ್ಯಕ್ತಿ'**. ಹಿಂಸೆಯ ಕುರಿತು ಮಾತನಾಡುವ ಮೊದಲು ವಿಮೋಚನಾದ ಕಾರ್ಯಕರ್ತೆ ಶಾಂತಮ್ಮ ಹಿಂಸೆಯ ಕುರಿತಾದ ಹಲವಾರು ಸಾಕ್ಷ್ಯಚಿತ್ರಗಳನ್ನು ತೋರಿಸಿದರು. ಯುದ್ಧದ ಹಿಂಸೆ, ವೈಯಕ್ತಿಕ ಹಿಂಸೆ, ಹೆಣ್ಣುಶಿಶು ಹತ್ಯೆ, ಬಲವಂತವಾಗಿ ಹಾಲು ಕುಡಿಸಿ ಹೆಣ್ಣುಮಕ್ಕಳನ್ನು ಊದಿಸುವುದು, ಹೆಣ್ಣು ಮಕ್ಕಳ ಮಾರಾಟ ಇವುಗಳನ್ನು ದೃಶ್ಯ ಮಾಧ್ಯಮದಲ್ಲಿ ತೋರಿಸಿದ ಇವರು ಅಂತಾರಾಷ್ಟ್ರೀಯ ಮಹಿಳಾ ನ್ಯಾಯಾಲಯ, ಅಲ್ಲಿ ಬಂದು ಸಾಕ್ಷ್ಯ ಹೇಳಿದವರನ್ನು ಕುರಿತು ಮಾತನಾಡಿದರು. ಅನಂತರದಲ್ಲಿ ಕೌಟುಂಬಿಕ ದೌರ್ಜನ್ಯಗಳನ್ನು ವಿವರಿಸಿದ ಇವರು ಕಾನೂನು, ಜನರ ನಡತೆ, ಅಭಿಪ್ರಾಯಗಳನ್ನು ಬಿಡಿಸಿ ಇಟ್ಟರು. ಕುಟುಂಬದಲ್ಲಿ ಹೆಂಗಸಿನ ದೌರ್ಜನ್ಯ ಉಸಿರುಗಟ್ಟಿಸಿ ಸಾವಿನಂಚಿಗೆ ತಳ್ಳುವಂತಿದ್ದರೂ, ಸುತ್ತಲಿನ ಸಮಾಜ ವಿಚ್ಛೇದನವನ್ನು ಬೆಂಬಲಿಸುವುದಿಲ್ಲ ಎಂಬುದನ್ನು ಸೋದಾಹರಣಪೂರ್ವಕ ವಿವರಿಸುತ್ತ ಇಂಥಲ್ಲಿ ಕಾನೂನು ಲೆಕ್ಕಕ್ಕಿಲ್ಲ ಎಂದರು.

ಕೋಮುವಾದ, ಹಿಂಸಾಚಾರ ಕುರಿತು ಮಾತನಾಡಿದ ತಸ್ನೀಂತಾಜ್‌ರವರು ಹಿಂದೂ ಮತ್ತು ಮುಸ್ಲಿಂ ಜನಾಂಗ ಇಬ್ಬರೂ ಬದುಕಲು ಸಾಧ್ಯವೆಂದು ಹೇಳುತ್ತಾ, ಕೋಮುವಾದ ಒಂದು Colonial legacy ಎಂದ ಅವರು ಮಹಿಳೆಯರು ಕೋಮುವಾದದ ಸಂಘರ್ಷವನ್ನು ತಪ್ಪಿಸಿದ ಹಲವಾರು ನಿದರ್ಶನ ನೀಡಿದರು ಮತ್ತು ಮಹಿಳೆಯರೇ ಇದನ್ನು ತಪ್ಪಿಸಲು ಸಮರ್ಥರು ಎಂದರು. ಅನಂತರ ಮಾತನಾಡಿದ ಸವಿತ ಅವರು ಕೋಮುವಾದದ ಹಿಂಸೆ ಹಾಗೂ ಗಲಭೆಗಳಲ್ಲಿ ನೇರವಾಗಿ ಬಲಿಯಾಗುವವರು ಮಹಿಳೆಯರು ಎಂದು ಹೇಳುತ್ತಾ ಎಲ್ಲಾ ಧರ್ಮಗಳೂ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಿವೆಯಾದರೂ ಪಟ್ಟಭದ್ರ ಹಿತಾಸಕ್ತ ಶಕ್ತಿಗಳು, ಮೂಲಭೂತವಾದಿಗಳು ಒಬ್ಬರ ವಿರುದ್ಧ ಇನ್ನೊಬ್ಬರನ್ನು ಎತ್ತಿ ಕಟ್ಟುತ್ತಿದ್ದಾರೆ ಎಂದರು. ಮನುಷ್ಯರು ತಮ್ಮ ಭದ್ರತೆಗಾಗಿ ಒಂದು ಧರ್ಮದ ಜೊತೆ ಗುರುತಿಸಿಕೊಂಡು ಬರುವುದನ್ನು ಹಲವಾರು ಸಣ್ಣ ಪುಟ್ಟ ಸಂಘಟನೆಗಳು, ಹೈಟೆಕ್ ಸಂಘಸಂಸ್ಥೆಗಳು, ಸಂಘಪರಿವಾರದವರು ಬಲಪಡಿಸುತ್ತಿದ್ದಾರೆ. ಮಹಿಳೆಯರು ಕೋಮುಗಲಭೆಯನ್ನು ತಪ್ಪಿಸಬಹುದು ಎಂಬುದು ಪ್ರಶ್ನಾರ್ಹ ಮತ್ತು ಮಕ್ಕಳ ಲಾಲನೆ ಪಾಲನೆ ಮಾಡುವ ತಾಯಂದಿರು ಎಂತಹ ಧಾರ್ಮಿಕ ಭಾವನೆಯನ್ನು ಮಕ್ಕಳಲ್ಲಿ ಬೆಳೆಸುತ್ತಾರೆ ಎಂಬುದೂ ಚರ್ಚಾರ್ಹ. ನಮ್ಮ ನೆನಪುಗಳಲ್ಲಿ ಹುದುಗಿರುವ ವಿಚಾರಗಳನ್ನು ಇಂದು ಕೆದಕುವ ಉದ್ದೇಶವೇನು ಎಂದು ಕೇಳುತ್ತಾ 'ಆವರಣ'ದಂತಹ ಪುಸ್ತಕಗಳ ಪ್ರಸ್ತುತತೆಯನ್ನು ಪ್ರಶ್ನಿಸಿದರು.

ಈ ಗೋಷ್ಠಿಯನ್ನು ನಿರ್ವಹಿಸಿದ ರಾಜೇಶ್ವರಿಯವರು ಮಾತನಾಡುತ್ತಾ ನಮ್ಮ ದೇಶದ ಶ್ರೇಣೀಕೃತ ಜಾತಿ ವ್ಯವಸ್ಥೆ ಅಂತಿಮವಾಗಿ ಕೋಮು ಭಾವನೆಯನ್ನು ಬೆಳೆಸುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತಿದೆ ಎಂದರು. ಧರ್ಮದ ವಿಕೃತೀಕರಣ ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಏಕಮುಖಿ ಸಂಸ್ಕೃತಿಯು ಬಹುಮುಖಿ ಸಂಸ್ಕೃತಿಯನ್ನು ನಾಶಮಾಡುತ್ತಿದೆ. ಗ್ರಾಮೀಣ ಪ್ರದೇಶಗಳಿಗಿಂತ ನಗರ

ಕೇಂದ್ರಿತ ಮನಸ್ಸುಗಳು ಕೋಮುಭಾವನೆಯನ್ನು ಬಿತ್ತುವುದರ ಜೊತೆಗೆ ಅಪಾಯಕಾರಿ ಏಕಮುಖಿ ಸಂಸ್ಕೃತಿಯನ್ನು ಹುಟ್ಟು ಹಾಕುತ್ತವೆ ಎಂದರು. ಪಿತೃಪ್ರಧಾನತೆ, ಜಾತಿವ್ಯವಸ್ಥೆ ಹಾಗೂ ಮೂಲಭೂತವಾದಗಳು ಜೊತೆಗೆ ಸೇರಿದಾಗ ಕಂಡುಬರುವ ಹಿಂಸೆಯ ಸ್ವರೂಪ ಗಾಭರಿ ಹುಟ್ಟಿಸು ವಂತಹದ್ದು ಎಂದರು.



ಯಮುನಾ, ದು. ಸುರಸ್ವತಿ, ರತಿರಾವ್

**'ವಿಜ್ಞಾನ (ಆರೋಗ್ಯ) ಮತ್ತು ಸಮೂಹ ಮಾಧ್ಯಮ'** ಕುರಿತ ಐದನೆಯ ಹಾಗೂ ಕೊನೆಯ ಗೋಷ್ಠಿಯಲ್ಲಿ ಮಾತನಾಡಿದ ವಿಜ್ಞಾನಿ ರತಿರಾವ್ 'ಆರೋಗ್ಯವೇ ಭಾಗ್ಯ' ಎಂದು ಹೇಳಿದರು. ಆರೋಗ್ಯವಲಯ ಎಲ್ಲರನ್ನೂ ಒಳಗೊಳ್ಳುತ್ತಿಲ್ಲ. ಜಾತಿ, ವರ್ಗ, ಲಿಂಗ, ಜನಾಂಗ, ಧಾರ್ಮಿಕ ಸಮುದಾಯ, ಭಾಷೆಗಳು ಇಲ್ಲಿ ಮುಖ್ಯವಾಗುತ್ತಿವೆ. ಅದರಲ್ಲಿಯೂ ಹೆಣ್ಣುಮಕ್ಕಳ ಆರೋಗ್ಯದ ಕಡೆ ಗಮನ ತೀರಾ ಕಡಿಮೆ. ಪಂಜಾಬ್, ಗುಜರಾತ್ ಮುಂತಾದ ರಾಷ್ಟ್ರಗಳಲ್ಲಿ ಮಹಿಳೆಯ ಆರೋಗ್ಯವನ್ನು ಸಂಪೂರ್ಣವಾಗಿ ಕಡೆಗಣಿಸಲಾಗುತ್ತಿದೆ. ಈ ವಲಯದ ಖಾಸಗೀಕರಣ ಜನಸಾಮಾನ್ಯರ ಆರೋಗ್ಯ ರಕ್ಷಣೆಗೆ ತಡೆಯಾಗುತ್ತದೆ. ಸರಕಾರದ ದೃಷ್ಟಿಯಲ್ಲಿ ತಾಯಿಯಾಗಿ ಮಹಿಳೆಯ ಆರೋಗ್ಯವನ್ನು ಕಾಪಾಡುವುದು ಮುಖ್ಯವಾಗುತ್ತಿದೆಯೇ ವಿನಾ ವ್ಯಕ್ತಿಯಾಗಿ ಅವಳ ಆರೋಗ್ಯ ಮುಖ್ಯವಾಗುತ್ತಿಲ್ಲ ಎಂದರು.

ದೃಶ್ಯ ಮಾಧ್ಯಮ ಕುರಿತು ಮಾತನಾಡಿದ ಅಭಿನೇತ್ರಿ ಹಾಗೂ ನಿರ್ಮಾಪಕಿ ಶೈಲಜಾ ನಾಗ್‌ರವರು ಟೆಲಿವಿಷನ್ ಒಂದು ವ್ಯಾಪಾರ ಕೇಂದ್ರವಾಗಿದೆಯೇ ಹೊರತು ಕಲಾಭಿವ್ಯಕ್ತಿಯ ಮಾಧ್ಯಮ ಆಗಿ ಧ್ವನಿಸಿಲ್ಲ ಎಂದರು. ಸಮಾಜ ಹಾಗೂ ಚಾನೆಲ್ ಮಾಲಿಕರು ಈ ಮಾಧ್ಯಮದ ಮೇಲೆ ಹಿಡಿತ ಹೊಂದಿರುತ್ತಾರೆ. ಇವರಿಗೆ T.R.P. ಮುಖ್ಯ, ಇದನ್ನು ಗುರುತಿಸುವ ವಿಧಾನದಲ್ಲೂ ವಂಚನೆಯ ಜಾಲವಿದೆ. T.R.P ಆಧಾರದ ಮೇಲೆ ಜಾಹೀರಾತುಗಳು ದೊರಕುತ್ತವೆ. ಜಾಹೀರಾತಿನ ಮೇಲೆಯೇ ಅವಲಂಬಿತವಾಗಿರುವ ಟೆಲಿವಿಷನ್ ಸಹಜವಾಗೇ ವ್ಯಾಪಾರ ಕೇಂದ್ರಿತ ವಾಗಿರುತ್ತದೆ. ಇದೊಂದು ಹಲವು ಪದಾರ್ಥಗಳು ಮತ್ತು ಮುಖ್ಯವಾಗಿ ಕಾಸ್ಮೆಟಿಕ್ ಇಂಡಸ್ಟ್ರಿಯನ್ನು ಪೋಷಿಸುವ ಪ್ರಧಾನ ಸಾಧನವಾಗಿ ಬಳಕೆಯಾಗುತ್ತಿದೆ. ಲಾಭಾಂಶ ಮುಖ್ಯವಾಗುವುದರಿಂದ ಹೆಣ್ಣು ಹೆಣ್ಣಾಗಿರಬೇಕು, ತಾಳೀಭಾಗ್ಯ, ಹೆಣ್ಣಿಗೆ ಹೆಣ್ಣು ಶತ್ರು ಇಂತಹವುಗಳ ಸುತ್ತಲೇ ಧಾರಾವಾಹಿಗಳು ಗಿರಕಿ ಹೊಡೆಯುವಂತೆ ನಿರ್ದೇಶಿಸಲಾಗುತ್ತದೆ. ವೃತ್ತಿಯ ಒಳವಲಯದಲ್ಲಿ ಲೈಂಗಿಕ ಕಿರುಕುಳ ಅತೀ ಸಾಮಾನ್ಯ. ಛಲ ಹಿಡಿದು ನಿಂತರೆ ಮಾತ್ರ ಬದುಕುಳಿಯಲು ಸಾಧ್ಯ ಎಂದು ನುಡಿದ ಶೈಲಜ ಅವರು ಮಹಿಳಾ ಬರಹಗಾರರು, ನಿರ್ದೇಶಕಿಯರು ಇಂಥಲ್ಲಿ ಹೆಚ್ಚು ತೊಡಗಿಕೊಂಡರೆ ಧಾರಾವಾಹಿಗಳ ಸ್ವರೂಪದಲ್ಲಿ ಸ್ವಲ್ಪ ಬದಲಾವಣೆ ತರಬಹುದು ಎಂದರು. ರಿಯಾಲಿಟಿ ಶೋಗಳಿಂದ ಮಕ್ಕಳ ಮೇಲೆ ಆಗುವ ದುಷ್ಪರಿಣಾಮಗಳನ್ನು ವಿವರಿಸಿದರು. ಸಂವಾದಕಾರರಾದ ಈ ಮೊದಲು ಸರ್ಕಾರೀ ದೂರದರ್ಶನದಲ್ಲಿ ಉದ್ಯೋಗ ನಿರ್ವಹಿಸಿರುವ ವಿಜಯಲಕ್ಷ್ಮಿಯವರು "೧೯೮೦ರ ಹೊತ್ತಿಗೆ ದೂರದರ್ಶನ ಮನೋರಂಜನೆಗಿಂತ ಹೆಚ್ಚಾಗಿ ಸಾಮಾಜಿಕ ಕಳಕಳಿಯನ್ನು ಹೊಂದಿತ್ತು" ಎಂದರು. ಜಾಗೃತಿ, ಆರೋಗ್ಯ, ಕೃಷಿ ಮೊದಲಾದವುಗಳಿಗೆ ಹೆಚ್ಚಿನ ಆದ್ಯತೆ ಇತ್ತು. ಸಾಮಾಜಿಕ ಜವಾಬ್ದಾರಿಯನ್ನು ನಿಭಾಯಿಸುತ್ತಿತ್ತು. ಖಾಸಗಿ ವಾಹಿನಿಗಳು ಹೆಚ್ಚಿದ ಮೇಲೆ ಇವೂ ಮಹಿಳೆಯರನ್ನು ಕೇವಲವಾಗಿ ವಸ್ತುವಾಗಿ ಕಾಣುತ್ತಿವೆ ಎನ್ನುತ್ತಾ ಸರಕಾರದ ಒಡೆತನದಲ್ಲಿರುವ ದೂರದರ್ಶನದ ಕಾರ್ಯಕ್ರಮಗಳನ್ನು ಕುರಿತು ವಿವರಿಸಿದರು.

ಕೊನೆಯದಾಗಿ ಪತ್ರಿಕಾ ಮಾಧ್ಯಮ ಕುರಿತು ಮಾತನಾಡಿದ ವಿ.ಎನ್. ವೆಂಕಟಲಕ್ಷ್ಮಿಯವರು ಪತ್ರಿಕೆಯಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ಮಹಿಳೆ ಜಾಣತನದಿಂದ ತನಗೆ ಬೇಕಾದುದನ್ನು ಹೇಳುವ ಅವಕಾಶವನ್ನು ಸೃಷ್ಟಿಸಿಕೊಳ್ಳಬೇಕಾಗಿದೆ ಎಂದರು. ಪತ್ರಿಕಾ ಮಾಧ್ಯಮದಲ್ಲಿ ಮಹಿಳೆಯರು ಒಟ್ಟಾಗುತ್ತಾರೆ ಎಂಬುದನ್ನು ಕೂಡಾ ವಿವರಿಸಿದರು. ದೃಶ್ಯ ಮಾಧ್ಯಮಕ್ಕೆ ಹೋಲಿಸಿದರೆ ಪತ್ರಿಕೆಯಲ್ಲಿ ಹೇಳಬಹುದಾದ ಸ್ವಾತಂತ್ರ್ಯ ಇನ್ನೂ ಇದೆ ಎಂದರು.

ಈ ಗೋಷ್ಠಿಯನ್ನು ನಿರ್ವಹಿಸಿದ ಡಾ. ವಿಜಯಾ ಒಟ್ಟಾರೆಯಾಗಿ ಈ ಎರೆಡು ದಿನದ ಕಾರ್ಯಕ್ರಮಗಳು ಕೆಲವು ಹೊಸ ಹೊಳಹುಗಳನ್ನು ನೀಡಿದ್ದನ್ನು ಗುರುತಿಸಿ, ಇಲ್ಲಿ ಮಂಡಿತವಾದ ವಿಷಯಗಳು ಒಂದೊಂದೂ ಇಡಿಯಾಗಿ ಒಂದು ದಿನದ ಚರ್ಚೆಯ ವ್ಯಾಪ್ತಿಯನ್ನು ಹೊಂದಿವೆ ಎಂದರು. ಕಾರ್ಯಾಗಾರದಲ್ಲಿ ಸಹಕರಿಸಿದವರನ್ನು ಸ್ಮರಿಸಿದರು.

ಕೊನೆಯಲ್ಲಿ ಕಾರ್ಯಾಗಾರದಲ್ಲಿ ಭಾಗವಹಿಸಿದ್ದ ಎಲ್ಲರೂ ಅಭಿಪ್ರಾಯ ವಿನಿಮಯ ಮಾಡಿಕೊಂಡರು.

ಚಳವಳಿಗಳು, ಹೋರಾಟಗಳು, ಸಾಹಿತ್ಯ ಪಥಗಳು ಸಾಗಬೇಕಾದ ದಾರಿ ಯಾವುದು? ಅದಕ್ಕೆ ಬೇಕಾದ ಚಿಂತನೆಗಳನ್ನು ಕಾರ್ಯತಂತ್ರಗಳನ್ನು ಹೇಗೆ ರೂಪಿಸಬೇಕು ಎಂದು ನಿರ್ಧರಿಸುವುದರಲ್ಲಿ ಇಂತಹ ಕಾರ್ಯಕ್ರಮಗಳು ದಿಕ್ಸೂಚಿಯಾಗಬಲ್ಲವು.

*ಡಾ. ರತಿ ರಾವ್, ಡಾ. ಚಂದ್ರಮತಿ ಸೋಂದಾ*
*ಚಂಪಾವತಿ ಎಚ್. ಎಸ್.*



Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018